# ಸೊಗಸಿನ ಕಥೆ

## ೧ನೆಯ ಭಾಗ

— ※ —

ಬರೆಹಗಾರ

ಸಾನೆ ಗುರೂಜಿ, ಎಂ. ಎ.



ಅನುವಾದಕ

ಭಾಸ್ಕರ ಗೋವಿಂದರಾವ ಗೋಖಲೆ,

ಗದಗ.

೧೯೪೭ ಇಸ್ವಿ                                        ಬೆಲೆ ೧-೦.

# ಬರಹಗಾರರ ಮುನ್ನುಡಿ.

ಲೋಕ ಕಥೆಗಳು ಪ್ರತಿಯೊಂದು ಸಮಾಜದಲ್ಲಿ ಇರುತ್ತವೆ. ಹಳ್ಳಿ ಪಳ್ಳಿಗಳಲ್ಲಿ ಹಬ್ಬಿವೆ. ಲೋಕಕಥಾ ವಾಙ್ಮಯ ಒಂದು ಪೀಳಿಗೆಯಿಂದ ಪೀಳಿಗೆ, ಒಂದು ಜನಾಂಗದಿಂದ ಮತ್ತೊಂದು ಜನಾಂಗಕ್ಕೆ ಬಾಯಿಂದ ಹೇಳಿಯೇ ಇಂದಿನ ವರೆಗೆ ಬಂದಿವೆ. ಬೇರೆ ಬೇರೆ ದೇಶದ ವ್ಯಾಪಾರಸ್ಥರು ಆಯಾ ದೇಶದ ಕಥೆಗಳನ್ನು ತಾವು ಹೋದಲ್ಲಿ ಹೇಳುತ್ತಿದ್ದರು. ಸರಕುಗಳೊಡನೆ ವಾಙ್ಮಯದ ವಿನಿಮಯವು ಆಗುತ್ತಿತ್ತು. ಸೊಗಸಿನ ಕಥೆಗಳ ಮೊದಲನೆ ಭಾಗದಲ್ಲಿರುವ ಈ ಲೋಕಕಥೆಗಳು ಬಂಗಾಲ ಪ್ರಾಂತದವು ಇರುತ್ತವೆ. ಬಂಗಾಲಿ ಲೋಕಕಥೆಯ ಇಂಗ್ಲೀಷ ಭಾಷೆಯಲ್ಲಿದ್ದ ಪುಸ್ತಕ ಒಂದನ್ನು ನಾನು ಬಹಳ ವರ್ಷಗಳ ಹಿಂದೆ ಓದಿದ್ದೆ. ನೂರಾರು ಹುಡುಗರಿಗೆ ಈ ಕಥೆ ನಾನು ಹೇಳಿದ್ದೇನೆ. ಹುಡುಗರಿಗೆ ಈ ಕಥೆ ಬಹಳ ಸೇರುತ್ತಿದ್ದವು. ಕಥೆಯ ಮೂಲಭಾಗ ಬಂಗಾಲಿ ಕಥೆಗಳಲ್ಲಿ ಹೇಳಿದ್ದು. ಆದರೆ ಅದನ್ನು ನನ್ನ ಭಾಷೆಯಲ್ಲಿ ಬರೆದಿದ್ದೇನೆ. ನಾನು ಕಥೆ ಹೇಳಿದ ಭಾಷೆಯಲ್ಲಿಯೇ ಬರೆದಿದ್ದೇನೆ. ಆದ್ದರಿಂದ ಇದು ಮೂಲ ಬಂಗಾಲಿ ಕಥೆಗಳ ಅನುವಾದವಲ್ಲ. ಸೊಗಸಿನ ಕಥೆಗಳ ಈ ಮೊದಲನೆ ಭಾಗದಲ್ಲಿಯ ಕಥೆಗಳು ಹುಡುಗರ, ಜನತೆಯ ಮೆಚ್ಚುಗೆಗೆ ಪಾತ್ರವಾದರೆ ಮತ್ತೆ ಹೆಚ್ಚು ಭಾಗಗಳನ್ನು ಪ್ರಸಿದ್ಧಿಸುವೆ. ಈ ಭಾಗಗಳಿಗೆ ನಾನು **'ಸೊಗಸಿನ ಕಥೆ'** ಎಂಬ ಹೆಸರು ಕೊಡುವೆನು. ಬೇರೆ ಬೇರೆ ಭಾಗದಲ್ಲಿ ಬರುವ ಕಥೆಗಳ ರೂಪ, ರಂಗ ಬೇರೆ ಬೇರೆಯಾಗಿರುವವು. ಕೆಲವು ಕಥೆಗಳು ಓದುಗರನ್ನು ನಗಿಸುವವು. ಕೆಲವುಗಳ ಸ್ವರೂಪ ಗಂಭೀರವಿರುವದು; ಕೆಲವು ಅಳಿಸುವವು; ಕೆಲವು ಬೋಧಪ್ರದವಿರುವವು. ಅವುಗಳಲ್ಲಿ ಕೆಲವು ಐತಿಹಾಸಿಕ ಕಥೆಗಳೂ ಬರುವವು. ಕೆಲವು ಕೇವಲ ಕಾಲ್ಪನಿಕವೂ ಇರುವವು. ಹುಡುಗರ ಮೆಚ್ಚುಗೆಗೆ ನನ್ನ ಕಥೆ ಪಾತ್ರವಾಗಲಿ, ನನ್ನ ಅಲ್ಪ ಸೇವೆ ಅವರ ಮೆಚ್ಚುಗೆ ಪಡೆಯಲಿ

ಅಮಳನೇರ
ತಾ. ೩೦—೭—೧೯೪೧

**ಸಾನೆಗುರುಜಿ.**

# ಅನುವಾದಕನ ಮಾತು.



ಸಾನೆ ಗುರುಜಿಯವರು ಮಹಾರಾಷ್ಟ್ರದಲ್ಲಿ ಚಿಕ್ಕಮಕ್ಕಳ ಕತೆಗಾರರೆಂದು ಪರಿಚಿತರಿದ್ದಾರೆ. ದೇಶದ ಹೊಸ ಪೀಳಿಗೆಯನ್ನು ಹೆಚ್ಚು ಕ್ಷಮ ಮಾಡಬೇಕು. ಅವರಲ್ಲಿ ದೇಶಪ್ರೇಮ, ಭಕ್ತಿ, ಉತ್ಸಾಹ, ಶೀಲ ಬೆಳೆಯಬೇಕು ಎಂಬ ಹಂಬಲ ಗುರುಜಿಯವರಿಗೆ. ಅವರು ಮರಾಠಿಯಲ್ಲಿ ಬರೆದ ಕಥೆಗಳ ಅನುವಾದ, ಅವರ ಉದ್ದೇಶವನ್ನು ಸಾಧಿಸಲಿಕ್ಕೆ ಮುಂದು ವರಿಯುವದಕ್ಕೆ ನಾನು ಮಾಡಿದ್ದೇನೆ. ಕನ್ನಡ ಕಂದರ ಮೆಚ್ಚುಗೆ ಪಡೆಯಲಿ ಎಂಬ ಆಸೆ.

ಇದು ಮೊದಲನೆಯ ಭಾಗ. ಇನ್ನು ಒಂಭತ್ತು ಭಾಗಗಳು ಅನುವಾದವಾಗಲಿವೆ. ಅವು ಕಾಲ ಕಾಲಕ್ಕೆ ಪ್ರಕಾಶಿಸಲ್ಪಡುವವು.

ಈ ಪುಸ್ತಕ ಪ್ರಕಾಶಿಸಲು ಮುಂದೆ ಬಂದು ನನಗೆ ಸಹಾಯ ಮಾಡಿದ್ದಕ್ಕಾಗಿ ನಾನು ಅನಂತ ಸಾಠೆ, ಕಿತಾಬ ಮಿನಾರ ತುಳಸಿಬಾಗ ರೋಡ, ಪುಣೆ ಇವರಿಗೆ ಉಪಕೃತನಾಗಿದ್ದೇನೆ. ಅಲ್ಪಾವಧಿಯಲ್ಲಿ ಇದನ್ನು ಅಚ್ಚು ಮಾಡಿದ್ದಕ್ಕಾಗಿ ಧರ್ಮತರಂಗಿಣಿ ಪ್ರೆಸ್ಸಿನವರಿಗೆ ನನ್ನ ವಂದನೆಗಳು.

ನನ್ನ ಹಸ್ತಲಿಖಿತ ಪ್ರತಿಯನ್ನು ಓದಿ ಸಲಹೆ ಸೂಚನೆಗಳನ್ನು ಇತ್ತ ನನ್ನ ಗೆಳೆಯರಾದ ಶ್ರೀ. ಕುಲಕರ್ಣಿ ಕಾಶೀನಾಥರಾಯರಿಗೆ ನಾನು ಬಹಳ ಆಭಾರಿಯಾಗಿದ್ದೇನೆ.

ಸಾನೆಗುರುಜಿಯವರ ವಾಙ್ಮಯ ಪ್ರಕಾಶನದ ಎಲ್ಲ ಹಕ್ಕುಗಳನ್ನು ಪಡೆದ ಅಮಳನೇರದ ವಕೀಲರಾದ ಎಂ. ಡಿ. ಪುಸಾಳಕರ ಇವರು ನನಗೆ ಅವರ ಈ "ಗೋಡಗೋಷ್ಟಿ"ಯ ಅನುವಾದ ಮಾಡಲು ಅಪ್ಪಣೆ ಕೊಟ್ಟು ಕನ್ನಡ ನಾಡಿಗೆ, ಕನ್ನಡ ಕಂದರಿಗೆ ಸೇವೆ ಸಲ್ಲಿಸುವ ಮಾಡಿಕೊಟ್ಟಿದ್ದಕ್ಕಾಗಿ ನಾನು ಅವರಿಗೆ ಉಪಕೃತನಿದ್ದೇನೆ.

ಹುಬ್ಬಳ್ಳಿ
ತಾ. ೧—೫—೧೯೪೭

ಭಾಸ್ಕರ ಗೋಖಲೆ.

# ಅರ್ಪಣಾ.



ಕನ್ನಡ ಕಂದರಿಗೆ.



# ಅನುಕ್ರಮಣಿಕೆ.

# ಸೊಗಸಿನ ಕಥೆಗಳು

## —( ಭಾಗ ೧. )—

## ಸವತಿಯರ ಕಥೆ.

### ೧.

### (ಬೇಕಾದವಳು---ಬೇಡಾದವಳು.)

ಒಂದು ಊರುಇತ್ತು. ಅಲ್ಲಿ ಒಬ್ಬ ಮನುಷ್ಯನಿದ್ದ. ಅವನಿಗೆ ಇಬ್ಬರು ಹೆಂಡಂದಿರಿದ್ದರು. ಒಬ್ಬಳು ಬೇಕಾದವಳು, ಇನ್ನೊಬ್ಬಳು ಅವನಿಗೆ ಬೇಡಾದವಳು. ಬೇಡಾದವಳು ಕುರೂಪಿಯಾಗಿದ್ದಳು. ಅವಳಿಗೆ ಬಹಳ ಕಷ್ಟ. ಕೋಳಿ ಕೂಗಿದೊಡನೆ ಕೆಲಸ ಮಾಡಲು ಆರಂಭಿಸುತ್ತಿದ್ದಳು. ಇಡೀ ದಿವಸ ದುಡಿಯುತ್ತಿದ್ದಳು. ನೀರು ಜಗ್ಗುವದು ಇವಳೇ. ನದಿಗೆ ಹೋಗಿ ಒಂದು ಮೊಟ್ಟೆ ಬಟ್ಟೆಗಳನ್ನು ಒಗೆಯುವದು ಇವಳೇ. ದನಕರ ನೋಡುವ ಕೆಲಸವು ಅವಳದೇ. ಬೀಸುವದು, ಮುಸುರೆ ತಿಕ್ಕುವದು, ಕಸ ತೆಗೆಯುವದು, ದೀಪ ಸ್ವಚ್ಛ ಮಾಡಿ ಹಚ್ಚುವದು ಇಂಥಹ ಎಲ್ಲ ಕೆಲಸಗಳನ್ನು ಮಾಡುವದು ಇವಳ ಪಾಲೇ. ಒಂದು ಕ್ಷಣವಾದರೂ, ಪಾಪ, ಇವಳಿಗೆ ಬಿಡುವೇ ಇಲ್ಲ. ಇಷ್ಟು ದುಡಿದರೂ ಕೂಡ, ಅವಳ ಪಾಲಿಗೆ ಒಂದು ಸವಿಮಾತು ಇಲ್ಲ, ಬಿಸಿಬಿಸಿಯಾದ ಅನ್ನವಿಲ್ಲ. ಅವಳ ಪಾಲಿಗೆ ತಂಗಳ ರೊಟ್ಟಿ. ಉಡುಪು ಹರಕು ಸೀರೆ. ಹಾಸಿಗೆ ಒಂದು ಹರಕುಕಂಬಳಿ. ಒಂದು ಮಂಗಲಸೂತ್ರ ಬಿಟ್ಟರೆ ಮೈಮೇಲೆ ಒಂದು ಗುಂಜಿತೂಕ ಬಂಗಾರದ ಆಭರಣವಿಲ್ಲ. ದಾಗೀನೆಗಳ ಮಾತು ಇರಲಿ. ಅದರಿಂದ ಮನುಷ್ಯನ ಜೀವ ನಿಲ್ಲುವಂತಿಲ್ಲ. ಆದರೆ ಪುಕ್ಕಟೆಯಾದಬಂದು ಸವಿ

ನ್ಮಾತು ಅವಳ ಪಾಲಿಗೆ ಇರಬಾರದೆ? ಏನು! ಈ ಜಗತ್ತಿನಲ್ಲಿ ಎಷ್ಟೋ ಬಾಧಿ ಸವಿಮಾತಿಗೂ ಬರಗಾಲವೇ?

ಅವಳ ಸವತಿ ನಾಲ್ಕು ಮಂದಿಯ ಎದುರು ಯಾವಾಗಲೂ ಅವಳನ್ನು ಜರಿಯುತ್ತಿದ್ದಳು. ಈ ರೀತಿ ಅಪಮಾನವಾಗುವದಕ್ಕಿಂತ ಮರಣವೇ ಲೇಸು ಎಂದೆನಿಸುತ್ತಿತ್ತು ಅವಳಿಗೆ. ಬೇಡಾದವಳು ತನ್ನಷ್ಟಕ್ಕೆ ತಾನೇ ಅಂದ್ರು ಕೊಳ್ಳುತ್ತಿದ್ದಳು. "ದೇಹ ಸವೆಯುವ ವರೆಗೆ ದುಡಿಯಬೇಕು, ಆದರೆ ಯಾರೂ ಕೇಳುವವರಿಲ್ಲ. ಮತ್ತೆ ಮೇಲೆ ಬೈಗಳು, ಶಾಪ, ತೆಗಳಿಕೆ ಇವೇ ನನ್ನ ದುಡಿತಕ್ಕೆ ಫಲಗಳೇ?" ಮನುಷ್ಯ ದುಡಿತಕ್ಕೆ ಬೇಸರಿಯುವದಿಲ್ಲ. "ಎಷ್ಟು ದಣಕೊಂಡಿಯಪ್ಪ" ಎಂಬ ಸವಿಮಾತು ಕಿವಿಗೆ ಬಿದ್ದರೆ ಸಾಕು, ಅವನಿಗಾದ ಶ್ರಮ ಸಫಲವಾಗುವದು. ಮನುಷ್ಯನಿಗೆ ಇದ್ದದ್ದು ಪ್ರೀತಿಯ ಹಸಿವು. ಬೇಡಾದವಳಿಗೆ ಈ ಜಗತ್ತಿನಲ್ಲಿ ಪ್ರೀತಿಯ, ಸಹಾನುಭೂತಿಯ ಒಂದು ಮಾತು ಸಿಗಲಿಲ್ಲ. ಪ್ರೀತಿ, ಸಹಾನುಭೂತಿ ಸಿಕ್ಕದವರಷ್ಟು ದುರ್ಭಾಗಿಗಳು ಮತ್ತಾರು?

ಮನುಷ್ಯನ ತಾಳ್ಮೆಗೂ ಒಂದು ಮರ್ಯಾದೆ ಇದೆ. ಒಂದು ದಿನ ಅವಳ ಸಹನಶೀಲತೆ ಮೀರಿತು. ಜೀವದಿಂದಿರುವದು ಅವಳಿಗೆ ಬೇಡಾಯಿತು. ದೇವರು ಸಹ ನಿಷ್ಠುರನೆಂದು ಅವಳಿಗೆ ಅನಿಸಿತು. ಹೀಗೆ ವಿಚಾರ ಮಾಡಿ ಆ ಜೀವಂತ ನರಕದೊಳಗಿಂದ ಅವಳು ಒಂದುದಿನ ಹೊರಬಿದ್ದಳು. ರಾತ್ರಿಯಾಗಿತ್ತು. ಎಲ್ಲ ಕಡೆಗೂ ಶಾಂತತೆ ನೆಲೆಸಿತ್ತು. ನಾಯಿ ಮಾತ್ರ ಅಲ್ಲಲ್ಲಿ ಬೊಗಳುತ್ತಿದ್ದವು. ನರಿಯ ಕೂಗು ನಡುನಡುವೆ ಒಮ್ಮೊಮ್ಮೆ ಕೇಳಿಸುತ್ತಿತ್ತು. ಮುಗಿಲಲ್ಲಿ ಚಂದ್ರನಿದ್ದಿಲ್ಲ. ಅದು ಕೃಷ್ಣಪಕ್ಷವಿದ್ದಿತು. ಕತ್ತಲು ಕವಿದಿತ್ತು. ತಾರೆಗಳ ಬೆಳಕೇ ಬೆಳಕು.

ಹಾಗೇ ಅವಳೊಬ್ಬಳೆ ನಡೆದಳು. ಅವಳ ದುಃಖ ಮಾತ್ರ ಅವಳೊಡನೆ ಇತ್ತು. ಕಂಬನಿ ಅವಳ ಗೆಳತಿಯಾಗಿದ್ದವು. ಕಾಲು ಬರೆಗಾಲು. ಹಾದಿ ನೆಟ್ಟಗೆ ಕಾಣುತ್ತಿರಲಿಲ್ಲ. ಕಲ್ಲು ಮುಳ್ಳು ಚುಚ್ಚುತ್ತಿದ್ದವು; ಆದರೆ ಸವತಿಯ ಬೈಗಳ ಶಾಪದಷ್ಟು ಚುಚ್ಚುತ್ತಿರಲಿಲ್ಲ. ಹೀಗೆಯೇ ನಡೆದಳು ಅವಳು ಆ ಅಡವಿಯಲ್ಲಿ.

ರಾತ್ರಿ ಮುಗಿಯುತ್ತ ಬಂದಿತು. ಬೆಳಕು ಹರಿಯುತ್ತಿತ್ತು. ಇಬ್ಬನಿಯು ಹನಿಗಳು ಟಪ್ ಟಪ್ ಎಂದು ಬೀಳುತ್ತಿದ್ದವು. ಅವೇನು ಇವಳಿಗಾಗಿಯೇ ಅಳುತ್ತಿದ್ದವೋ, ಏನೋ? ಹಕ್ಕಿಗಳ ಕಿಲಿಬಿಲಿ ಸುರುವಾಗಿತ್ತು. ಗಿಡಗಳು ಸ್ಪಷ್ಟವಾಗಿ ಕಾಣಹತ್ತಿದವು. ಜಗತ್ತಿನಲ್ಲೆಲ್ಲ ಬೆಳಕು ಹಬ್ಬುತ್ತಿತ್ತು; ಆದರೆ ಇವಳ ಮನಸ್ಸಿನಲ್ಲಿ ಕಗ್ಗತ್ತಲೆ ಕವಿದಿತ್ತು. ಅವಳು ಚಿರಂತನ ನಿದ್ರೆ ಮಾಡಲು ಹೊರಟಿದ್ದಳು.

ದಟ್ಟವಾದ ಅಡವಿಯಲ್ಲಿಯೇ ಹೊರಟಿದ್ದಳು. ಅವಳು ಹೋಗುವ ಕಾಲುದಾರಿಯಲ್ಲಿ ಒಂದು ತುಲಸಿಗಿಡವಿತ್ತು. ಹೋಗುವವರು ಬರುವವರೆಲ್ಲರು ಅದರ ಎಲೆಗಳನ್ನು ಹರಿದು ತಿಂದುಬಿಟ್ಟಿದ್ದರು. ಆ ಗಿಡ ದೀನಮುಖಮಾಡಿ ತನ್ನ ಕಡೆ ನೋಡುವಂತೆ ಅವಳಿಗೆ ಕಂಡಿತು. ಅವಳು ಆ ಗಿಡದ ಹತ್ತಿರ ಹೋಗಿ ಅಂದಳು, “ತುಲಸೀದೇವಿ! ಬರುವವರು, ಹೋಗುವವರು ಬರೀ ನಿನ್ನ ಎಲೆಗಳನ್ನು ಹರಿದು ತಿಂದುಬಿಟ್ಟಿದ್ದಾರೆ. ನಿನ್ನ ಎಲೆಯ ಸಂಪತ್ತು ಲೂಟಿ ಮಾಡಿದ್ದಾರೆ. ಆದರೆ ನಿನಗೆ ಯಾರೂ ನೀರು ಹಾಕಿಲ್ಲ, ಅಥವಾ ನಿನ್ನ ಬೇರುಗಳ ಮೇಲೆ ಮಣ್ಣು ಹಾಕಿಲ್ಲ. ನಾನು ನಿನಗೆ ನೀರು ಹಾಕುತ್ತೇನೆ. ಮತ್ತು ಮಣ್ಣಿನಿಂದ ನಿನ್ನ ಬೇರು ಮುಚ್ಚುತ್ತೇನೆ.” ಹೀಗೆಂದು ಅಲ್ಲಿಯೇ ಬಿದ್ದ ಎಲೆಗಳ ದೊನ್ನಿ ಮಾಡಿ, ಹರಿಯುತ್ತಿರುವ ಝರಿಯ ನೀರು ತಂದು ಹಾಕಿದಳು. ಮತ್ತು ಅದರ ಬೇರಿಗೆ ಮಣ್ಣು ಹಾಕಿದಳು. ಮತ್ತೆ ತುಲಸಿಗೆ ನಮಸ್ಕಾರ ಮಾಡಿ ಮುಂದೆ ಹೊರಟಳು.

“ಒಂದು ಕೆರೆಯೋ, ಹಾಳು ಭಾವಿಯೋ, ನದಿಯೋ ಏನಾದರೂ ಒಂದು ಇರುವದು ಖಂಡಿತ, ಅದರಲ್ಲಿ ಹಾರಿಕೊಂಡರಾಯಿತು” ಎಂದು ವಿಚಾರ ಮಾಡುತ್ತಾ ಅವಳು ಹಾಗೆಯೇ ಮುಂದೆ ಹೊರಟಳು. ಅಲ್ಲಿ ಅವಳಿಗೆ ಒಂದು ಜಡಿ ಹತ್ತಿಯ ಗಿಡ ಕಂಡಿತು. ಇದರ ಎಳೆ ಬಹಳ ಚಂದಾಗಿರುತ್ತವೆ. ಹೆಣ್ಣುಮಕ್ಕಳು ಇದರಿಂದ ಆರತಿಗಾಗಿ ಬತ್ತಿಗಳನ್ನು ಮಾಡುತ್ತಾರೆ. ಅಲ್ಲಿ ಓಡ್ಯಾಡುವವರು ಈ ಗಿಡದ ಹತ್ತಿಯನ್ನೆಲ್ಲ ಕಸಿದುಕೊಂಡು ಹೋಗಿದ್ದರು. ಆ ಗಿಡದ ಅಚ್ಚ ಬಿಳಿಯದಾದ ಹತ್ತಿಯ ಸಂಪತ್ತನ್ನೆಲ್ಲ ಒಯ್ದಿದ್ದರು. ಆದರೆ ಅದಕ್ಕೆ ಬೇಕಾಗುವ ನೀರಾಗಲಿ ಅಥವಾ ಒಡಿ ಮಣ್ಣಾ

ಗಲಿ, ಆ ಗಿಡ ಯಾರಿಂದ ಕಂಡಿದ್ದಿಲ್ಲ. ಜನ ರೀತಿಯೇ ಹೀಗೆ. ತಕ್ಕೊಳ್ಳುವದು ಎಲ್ಲರಿಗೂ ಬೇಕು; ಕೊಡುವದು ಯಾರಿಗೂ ಬೇಡ. ಬೇಡಾದವಳು ಆ ಗಿಡದ ಹತ್ತಿರ ಹೋದಳು. ಸಹಾನುಭೂತಿ ಶೂನ್ಯ ಮತ್ತು ಪ್ರೀತಿಯ ಅಭಾವದ ಜೀವನ ಎಷ್ಟು ಅಸಹ್ಯವಿರುತ್ತದೆಂಬುದರ ಅನುಭವ ಇವಳಿಗಿತ್ತು. “ಬೇಡ, ಅಂಜಬೇಡ ಹತ್ತಿಯ ಗಿಡವೆ! ನಾನು ನಿನಗೆ ನೀರು ಹಾಕುತ್ತೇನೆ, ನಾಲ್ಕು ಹಿಡಿ ಮಣ್ಣು ನಿನಗೆ ಹಾಕುತ್ತೇನೆ. ಎಂದು ಅಂದು ಅವಳು ಆ ಗಿಡಕ್ಕೆ ನೀರು ಹಾಕಿ, ಮಣ್ಣು ಹಾಕಿದಳು ಮತ್ತೆ ಹಾಗೆಯೇ ಮುಂದ ಸಾಗಿದಳು.

ಇವಳು ಬಹಳ ಉತಾವಳಿಯಾದಳು. “ಏನಿದ, ಇನ್ನೂ ಯಾವ ಕೆರೆ, ಭಾವಿ, ನದಿ ಯಾವದೂ ಬರಲೊಲ್ಲದಲ್ಲಾ ಅಂದಳು. ಆದರೆ ಒಂದು ಪೇರಲ ಗಿಡ ಕಂಡಳು. ಆದರೆ ಅದು ಬರಿಯದಾಗಿತ್ತು. ಕಾಯಿ ಇದ್ದಾಗಲೆ ಬರಹೋಗುವ ಜನ ಕಲ್ಲು ಹೊಡೆದು ಕಾಯಿ ಕೆಡವಿ ತಿಂದುಬಿಟ್ಟಿದ್ದರು. ಪಕ್ಷಿಗಳು, ಮಂಗಗಳು ಹಣ್ಣುಗಳಾದಮೇಲೆ ಮಾತ್ರ ತಿನ್ನುತ್ತವೆ. ಆದರೆ ಮನುಷ್ಯ ಉತಾವಳಿ; ಅವನು ಕಾಯಿಗಳನ್ನೇ ತಿಂದುಬಿಡುತ್ತಾನೆ. ಪಕ್ಷಿಗಳು ಅನ್ನುತ್ತಿರಬೇಕು, “ಈ ಮನುಷ್ಯ ಪ್ರಾಣಿ ಎಷ್ಟು ಕೂಳಬಕ್ಕನಾಗಿದ್ದಾನೆ. ಇವನು ಸರ್ವಭಕ್ಷಕನಾಗಿದ್ದಾನೆ” ಆದರೆ ಇವಳು ಹಿಗ್ಗಿದ್ದಿಲ್ಲ, ಆ ಗಿಡದ ಬಳಿಗೆ ಹೋಗಿ ಅಂದಳು, ‘‘ನಿನ್ನನ್ನು ಯಾರೂ ಜೋಪಾನ ಮಾಡಿಲ್ಲ. ನೀನು ಯಾರಿಂದಲೂ ನೀರು ಕಂಡಿಲ್ಲ. ನಾನು ನಿನಗೆ ನೀರು ಹಾಕುವೆ ಮತ್ತು ನಿನ್ನ ಬುಡದಲ್ಲಿ ಮಣ್ಣು ಹಾಕುವೆ.” ಹೀಗೆಂದು ಪೇರಲ ಗಿಡಕ್ಕೆ ನೀರು ಮಣ್ಣು ಹಾಕಿ ಮುಂದರಿದಳು.

ವಿಸ್ತಾರವಾದ ಅಡವಿಯಾಚೆ ಬಂದಳು; ಅಲ್ಲಿ ದೊಡ್ಡದಾದ ಬೈಲು ಇತ್ತು. ಸೂರ್ಯ ಆಗಲೇ ಮೇಲಕ್ಕೇರಿದ್ದ. ಕಾಲು ಸೋಲುತ್ತಿದವು. ಅಷ್ಟರಲ್ಲಿ ಒಂದು ದೊಡ್ಡ ಕೆರೆ ಕಂಡಿತು ಇವಳಿಗೆ. ವಿಶಾಲ, ಸುಂದರವಾದ ಸರೋವರವದು. ಅದರಲ್ಲಿ ಸಣ್ಣ ಸಣ್ಣ ಅಲೆಗಳೆದ್ದವು. ಅಲೆಗಳೊಂದಿಗೆ ಅಲ್ಲಾಡುತ್ತ ತಾವರೆಗಳಿದ್ದವು. ಹಂಸ ಪಕ್ಷಿಗಳು ಸಣ್ಣ ದೋಣಿಗಳಂತೆ ತೇಲುತ್ತಿದ್ದವು. ಆ ಸರೋವರಕ್ಕೆ ಒಂದು ಮಗ್ಗಲಿಗೆ ಘಟ್ಟ

ಕಟ್ಟಿದ್ದು ಇತ್ತು. ಇವಳು ಅಲ್ಲಿ ಕೊನೆಯ ಪಾವಟಿಗೆಯ ಮೇಲೆ ನಿಂತು ಮನಸ್ಸಿನಲ್ಲಿ ನಿಶ್ಚಯ ಮಾಡಿದಳು. ಸೆರಗು ಕಟ್ಟಿದಳು. ನೀರಿನಲ್ಲಿ ಹಾರುವಷ್ಟರಲ್ಲಿ "ನಿಲ್ಲು! ಅಭಾಗಿ ಜೀನವೇ ನಿಲ್ಲು!" ಎಂಬ ಗಂಭೀರ ನಾಲ್ಕೂ ಕಡೆ ಮೊಳಗಿಬಿಟ್ಟಿತು.

ಹೀಗೆ ಆಲೋಚಿಸುತ್ತ ಕಣ್ಮುಚ್ಚಿ ತನ್ನನ್ನು ರಕ್ಷಿಸುವವರು ಯಾರಾದರೂ ಇದ್ದಾರೆಯೋ ಇಲ್ಲಿ? ಆಹಾ. ಅಲ್ಲಿ ಒಬ್ಬ ಸಾಧು ಇರುತ್ತಿದ್ದನು. ಈತ ಧ್ಯಾನದಿಂದ ಇವಳ ಆತ್ಮಹತ್ಯ ಮಹಾಪಾತಕವೆಂಬುದನ್ನು ಅವನು ತಿಳಿದುಕೊಂಡಿದ್ದನು. ಅವನು ಆಡಿದ ಮಾತೇ ಇತ್ತು ಅದು. ಈ ಮಾತು ಕೇಳಿ ಅವಳು ಘಾಬರಿಯಾದಳು. ಎಂಥಹ ಜಗತ್ತಿದು! ನನಗೆ ಸುಖದಿಂದ ಸಾಯಲೂ ಕೊಡುವದಿಲ್ಲವಲ್ಲ! ಸುಖದಿಂದ ಬಾಳಲು ಅಂತೂ ಕೊಡುವದೇ ಇಲ್ಲ. ಹೀಗೆ ಅನಿಸಿತು ಈ ಮಾತು ಕೇಳಿ ಅವಳಿಗೆ.

ಸಾಧು ಆಕೆ ಹತ್ತಿರ ಬಂದನು. ಒಳ್ಳೆ ಕರುಣೆಯಿಂದ, ಪ್ರೀತಿಯಿಂದ ಅವನು ಅವಳಿಗೆ ಅಂದ, "ಅಮ್ಮಾ ನೀನು ಜೀವ ಕೊಡುವದು ಏಕೆ? ದೇವರು ಇತ್ತ ಬಂಗಾರದಂಥ ಕಾಯವನ್ನು ಬಿಸಾಟಿ ಒಗೆಯುವದು ಏತಕ್ಕೆ? ಈ ಕಾಯಸೇವೆಯಲ್ಲಿಯೇ ಸವೆಯಬೇಕು, ಪರೋಪಕಾರದಿಂದಲೇ ಸಲ್ಲಾಗಬೇಕು. ಆತ್ಮಹತ್ಯ ಬಹು ದೊಡ್ಡ ಪಾಪ. ಹೀಗೆ ಅವಿವೇಕಿ ಯಾಗಬೇಡವಮ್ಮ ನನ್ನ ಮಾತು ಕೇಳು."

"ಅಹುದು ಸಾಧುಮಹಾಶಯರೆ, ನೀವೆನ್ನುವದು ನಿಜ. ಇಂದಿನ ವರೆಗೆ ಇದು ದೊಡ್ಡ ಪಾಪವೆಂದು ತಿಳಿದೇ, ನಾನು ಆತ್ಮಹತ್ಯ ಮಾಡಲಿಲ್ಲ. ಆದರೆ ಈಗ ನನ್ನ ತಾಳ್ಮೆಯ ಮರ್ಯಾದೆ ತೀರಿತು. ನಾನು ಜೀವಿಸುವದಾದರೂ ಏತಕ್ಕೆ? ಒಂದು ಪ್ರೀತಿಯ ಮಾತಿಲ್ಲ ನನ್ನ ಪಾಲಿಗೆ. ಒಂದು ತುತ್ತು ಅನ್ನ ಸುಖದಿಂದ ಉಣಲಾರೆ ನಾನು. ಎಷ್ಟು ದುಡಿದರೂ ಅದರ ಬೆಲೆ ಇಲ್ಲ ಯಾರಿಗೂ. ನಾನು ಸತ್ತರೆ ನನಗಾಗಿ ಅಳುವವರೂ ಯಾರೂ ಇಲ್ಲ. ಮರಣದ ಸುಖವಾದರೂ ಸಿಕ್ಕಲಿ ನನಗೆ" ಎಂದು ಅವಳಂದಳು.

"ನಿನಗೆ ದುಃಖವಾದರೂ ಯಾವುದಿದೆ ಹೇಳಮ್ಮ" ಎಂದಂವನು ಆ ಸಾಧು. "ಮಹಾರಾಯಾ ನಾನು ನನ್ನ ಗಂಡನಿಗೆ ಬೇಡಾದವಳು. ನನ್ನ ಸವತಿ ಅವನಿಗೆ ಬೇಕಾದವಳು. ಅವಳು ಮಾಡಿದ್ದೆಲ್ಲ ಚಂದ ಅವನಿಗೆ. ನಾನು ಮಾಡಿದ್ದೆಲ್ಲ ಅವನಿಗೆ ಸೇರುವಂತಿಲ್ಲ. ನನ್ನ ಪಾಲಿಗೆ ದೇವರು ರೂಪ ಕೊಟ್ಟಿಲ್ಲ. ಇದು ನನ್ನ ತಪ್ಪೇ? ನಾನು ಕುರೂಪಿ ಎಂದು ಎಲ್ಲರೂ ನನ್ನನ್ನು ಜರಿಯುತ್ತಾರೆ, ಕಾಡುತ್ತಾರೆ, ಪೀಡಿಸುತ್ತಾರೆ. ಕುರೂಪಿ ಜೀವಿಸುವದಾದರೂ ಏತಕ್ಕೆ? ಪಕ್ಷಿಪಕ್ಕಿಗಳನ್ನು, ಮೃಗಗಳನ್ನು ದೇವರು ಚಿತ್ರಿಸಿದ್ದಾನೆ. ನನ್ನ ಪಾಲಿಗೆ ಮಾನ ಬಂಡವಾಲು ತೀರಿತೆಂದು ತೋರುತ್ತದೆ. ಇರಲಿ ನನ್ನ ಭಾಗ್ಯ ನನಗೆ. ಇನ್ನು ನಾನು ಹಾರಿಕೊಂಡು ಜೀವ ಕೊಡುವೆ" ಅಂದಳು ಅವಳು.

ಸಾಧು ಅವಳಿಗೆ ಅಂದನು, "ನಿಲ್ಲು, ನಾನು ನಿನಗೆ ರೂಪ ಲಾವಣ್ಯವನ್ನು ಕೊಡುವೆ. ದೇವರನ್ನು ನೆನಿಸಿ ಈ ನೀರಿನಲ್ಲಿ ಮೂರು ಸಾರೆ ಮುಳುಗಿ ಏಳು; ಅಂದರೆ ನೀನು ಅಪ್ಸರೆಯಂತೆ ಕಾಣುವಿ. ನನ್ನನ್ನು ನಂಬು ಅಮ್ಮ."

ಸಾಧುವಿಗೆ ನಮಸ್ಕಾರ ಮಾಡಿದಳು. ಅವನು ಅಲ್ಲಿಂದ ಹೋದನು. ಆಮೇಲೆ ಅವಳು ದೇವರನ್ನು ನೆನಿಸಿ ಮೂರಾವರ್ತಿ ಸರೋವರದ ನೀರಿನಲ್ಲಿ ಮುಳುಗಿ ಎದ್ದಳು. ಮೂರನೆ ಆವರ್ತಿ ಮುಳುಗಿ ಎದ್ದೊಡನೆಯೇ ಅವಳು ಸ್ವರ್ಗಾಂಗನೆಯಂತೆ ಕಾಣಲು ಹತ್ತಿದಳು. ಅತಿ ರೂಪವತಿಯಾದಳು.

ಮನಸ್ಸಿನಲ್ಲಿ ಸಾಧುವನ್ನು ನೆನಿಸುತ್ತ, ಕೊಂಡಾಡುತ್ತ ಅವಳು ತಿರುಗಿ ಮನೆಗೆ ಹೊರಟಳು. ತನ್ನ ಕಾಡಾಟ ಮುಗಿಯಿತು. ನನ್ನ ಗಂಡ ನನ್ನನ್ನು ಪ್ರೀತಿಯಿಂದ ಬರಮಾಡಿಕೊಳ್ಳುವನು. ಹೀಗೆ ಮನಸ್ಸಿನಲ್ಲಿ ವಿಚಾರಿಸುತ್ತ ಕಲ್ಲು ಮುಳ್ಳು ಲೆಕ್ಕಿಸದೆ ಅವಳು ಭರದಿಂದ ಹೊರಟಳು. ಹೂವಿನ ಹಾಸುಗೆಯ ಮೇಲೆ ನಡೆದಂತೆ ಅನಿಸಿತು ಅವಳಿಗೆ.

ಬೈಲು ದಾಟಿ ಮತ್ತೆ ದಟ್ಟವಾದ ಅಡವಿ ಸೇರಿದಳು. ಒಳ್ಳೇ ವೇಗದಿಂದ ಹೊರಟಿದ್ದಾಗ "ನಿಲ್ಲು ಅಮ್ಮಾ, ಇಲ್ಲಿ ಬಾ" ಎಂಬ ಶಬ್ದ ಅವಳ

ಕಿವಿಗೆ ಬಿತ್ತು. ಅತ್ತಿತ್ತ ನೋಡಿದಳು ಯಾರೂ ಕಾಣಲಿಲ್ಲ. ಭ್ರಮೆಎಂದೆನಿಸಿತು ಅವಳಿಗೆ. ಮತ್ತೆ ಹೊರಟಳು. ಮತ್ತೆ ಅದೇ ಶಬ್ದ ಕೇಳಿಸಿದವು. ಇದು ಭ್ರಮೆ ಅಲ್ಲ, ನಿಜವಾಗಿ ಯಾರಾದರೂ ಕರೆಯುತ್ತಾರೆ ಎಂದು ಅವಳಿಗೆ ಅನಿಸಿತು. ಆಗ ಮೊದಲು ತಾನು ನೋಡಿದ, ಸೇವೆ ಸಲ್ಲಿಸಿದ ಪೇರಲ ಗಿಡ ಆನಂದದಿಂದ ಅಲ್ಲಾಡುತ್ತಿರುವದು ಕಂಡಿತು. ಅದರ ಹತ್ತಿರ ಹೋಗಿ "ಓಹೋ! ನೀ ನನಗೆ ಕರೆದೆಯಾ ?" ಎಂದು ಕೇಳಿದಳು. ''ಅಹುದು'' ಎಂದು ಆ ಗಿಡವು ಉತ್ತರಕೊಟ್ಟಿತು.

"ಏಕೆ, ನನಗೇಕೆ ಕರೆದಿ?'' ಅಂದಳವಳು.

''ಅಮ್ಮಾ, ನೀವು ದುಃಖದಲ್ಲಿದ್ದಾಗ ಸಹ ನನ್ನ ಪರಾಮರ್ಶೆ ತಕ್ಕೊಂಡಿರಿ. ನನಗೆ ನೀರು ಹಾಕಿದಿರಿ, ಮಣ್ಣು ಹಾಕಿದಿರಿ. ಇಂದಿನ ವರೆಗೆ ಎಲ್ಲರೂ ನನ್ನ ಕಾಯಿಗಳನ್ನೇ ಹರಿದುಕೊಂಡು ಹೋದರು. ನೀವು ಮಾತ್ರ ನನ್ನ ಸೇವೆಯನ್ನಷ್ಟೇ ಮಾಡಿ, ಒಂದು ಕಾಯಿ ಸಹ ತಕ್ಕೊಳ್ಳದೆ ಹೋದಿರಿ. ನಿಮ್ಮನ್ನು ಎಷ್ಟು ನೆನಿಸಲಿ, ಕೊಂಡಾಡಲಿ! ಮನುಷ್ಯರಂತೆ ಗಿಡಗಳು ಕೃತಘ್ನರಿರುವದಿಲ್ಲ. ಕಲ್ಲಿನಿಂದ ಹೊಡೆದವರಿಗೂ, ಕೊಡಲಿಯಿಂದ ಕಡಿಯುವವರಿಗೂ ನಾವು ಹಣ್ಣುಗಳನ್ನು ಕೊಡುತ್ತೇವೆ, ನೆರಳನ್ನು ದಯಪಾಲಿಸುತ್ತೇವೆ. ಪ್ರೀತಿಯ ಸಾಲ ಎಂದಿಗೂ ತೀರುವಂತಿಲ್ಲ. ಆದರೂ ನಾನೇನೋ ನಿಮಗೆ ಅಲ್ಪ ಕಾಣಿಕೆ ಕೊಡಬೇಕೆನ್ನುತ್ತೇನೆ "ದಯಮಾಡಿ ಇಲ್ಲ ಅನ್ನಬೇಡಿ" ಎಂದು ಪೇರಲ ಗಿಡ ಅಂದಿತು.

''ನನ್ನ ನಲುಮೆಯ ಪೇರಲಗಿಡವೆ ನೀನು ನನಗೆ ಕೊಡುವುದಾದರೂ ಏನು?" ಅವಳು ಅಂದಳು. "ಒಂದು ಸಣ್ಣ ಹಣ್ಣು ತುಂಬಿದ ಪುಟ್ಟಿ" ಗಿಡವು ಅಂದಿತು. "ಏನಿದೆ ಅದರಲ್ಲಿ ?" ಅವಳು ಅಂದಳು. ''ಇದು ನನ್ನ ನಲುಮೆಯ ಕಾಣಿಕೆ. ಇದರಲ್ಲಿ ನಿನಗೆ ಬೇಕಾದ ಹಣ್ಣು ಸಿಗುವವು" ಅಂದಿತು ಆ ಪೇರಲ ಮರವು.

ಆ ಪುಟ್ಟಿ ತಕ್ಕೊಂಡು ಅವಳು ಹಾಗೆಯೇ ನೀರಿನಕಡೆ ಭರದಿಂದ ಮುಂದರಿದಳು. ಕೆಲವು ಅಂತರದ ಮೇಲೆ "ನಿಲ್ಲು, ಅಮ್ಮಾ ನಿಲ್ಲು, ಎಷ್ಟು ಭರದಿಂದ ನಡೆಯುವಿಯಲ್ಲ" ಎಂಬ ಶಬ್ದ [illegible] ಅವಳಿಗೆ.

ಅತ್ತಿತ್ತ ನೋಡಿದಳು. ಅವು ಜಡಿ ಹತ್ತಿಯ ಗಿಡದ ಶಬ್ದಗಳಿದ್ದವು. ಅದರ ಹತ್ತಿರ ಹೋಗಿ ಅವಳು "ನೀನು ನನ್ನನ್ನು ಕರೆದೆಯಾ?" "ಅಹುದು" ಎಂದಿತು ಗಿಡ. "ಏಕೆ?" ಅಂದಳು ಅವಳು. "ಏನು ವಿಚಿತ್ರ ನೀನು ಕೇಳುವದು? ಇಂದಿನ ವರೆಗೆ ಎಲ್ಲರೂ ನನ್ನ ಹತ್ತಿಯನ್ನೇ ಹರಿದುಕೊಂಡು ಹೋದರು. ಅವರ ಒಬ್ಬನು ಒಂದು ಪ್ರೀತಿಯ ಮಾತು ಆಡಲಿಲ್ಲ, ನನ್ನ ಯೋಗಕ್ಷೇಮ ಕೇಳಲಿಲ್ಲ. ನನ್ನ ತಿರಿದ ಜೀವನ್ನು [illegible] ಮುಟ್ಟಲಿಲ್ಲ. ಈ ರೀತಿ ನನ್ನನ್ನು ಪರಾಮರಿಸಿದವಳು ನೀನೊಬ್ಬಳೇ. ಎಷ್ಟು ಸೊಗಸಾದ ಸ್ವಭಾವ ನಿನ್ನದು! ನಿನ್ನ ಉಪಕಾರವನ್ನು ತೀರಿಸುವದು ಸಾಧ್ಯವೇ ನನಗೆ? ಗಿಡಗಳು ಕೃತಘ್ನವಲ್ಲ. ಅವು ಯಾವಾಗಲೂ ಉಪಕಾರಗಳನ್ನು ಮರೆಯುವದಿಲ್ಲ."

"ನೀನು ಕೊಡುವದಾದರೂ ಏನು ನನಗೆ?" ಅವಳು ಅಂದಳು. "ನಾನು ಒಂದು ಸಣ್ಣ ಗಂಟು ಕೊಡುತ್ತೇನೆ. ಅದರ ಹೊರತು ನನ್ನ ಕಡೆ ಮತ್ತೇನು ಇಲ್ಲ." ಎಂದಿತು ಆ ಗಿಡ. "ಏನಿದೆ ಅದರಲ್ಲಿ?" ಅಂದಳವಳು. "ನಿನಗೆ ಬೇಕಾದ ತರದ ಅರಿವೆ ಅದರಲ್ಲಿ ಸಿಕ್ಕುವದು" ಎಂದಿತು ಆ ಗಿಡ. "ಇರಲಿ, ನನ್ನ ಹತ್ತಿರ ಈ ನಿನ್ನ ಪ್ರೀತಿಯ ಕುರುಹು" ಎಂದು ಅವಳು ಆ ಗಂಟು ತಕ್ಕೊಂಡಳು.

ಹೀಗೆ ಮತ್ತೆ ಪುಟ್ಟ ಗಂಟು ತಕ್ಕೊಂಡು ಒಳ್ಳೇ ಆತುರದಿಂದ ಮುಂದೆ ಸಾಗಿದಳು. ಅಷ್ಟರಲ್ಲಿ "ಬಾ, ನಿಲ್ಲು" ಎಂಬ ಶಬ್ದ ಕೇಳಿದಳು. ಅವು ಆ ತುಲಸಿಗಿಡದ ಮಾತಾಗಿದ್ದವು. ಅವಳು ತುಲಸಿದೇವಿಯ ಹತ್ತಿರ ಹೋಗಿ ನಮಸ್ಕಾರ ಮಾಡಿ, "ತಾಯಿ, ತುಲಸಿದೇವಿ, ನೀನು ಈ ನಿನ್ನ ಮಗುವನ್ನು ಕರೆದಿಯಾ' ಅಂದಳು.

"ಹೌದು, ನನ್ನ ಮುದ್ದಿನ ಮಗು. ಇಂದಿನ ವರೆಗೆ ನಿನ್ನಂತೆ ಯಾರೂ ನನ್ನ ಸೇವೆ ಮಾಡಿಲ್ಲ. ನಾನು ನಿನ್ನ ಮೇಲೆ ಪ್ರಸನ್ನಳಿದ್ದೇನೆ. ನಾನು ನಿನಗೆ ಅಲ್ಪ ಕಾಣಿಕೆ ಕೊಡುವೆ" ಅಂದಳು ತುಲಸಿದೇವಿ. "ಏನದು" ಅವಳು ಕೇಳಿದಳು. "ಒಂದು ಸಣ್ಣ ಕರಂಡಕವನ್ನು ಕೊಡುವೆ" ತುಲಸಿ ಅಂದಳು. "ಏನಿದೆ ಅದರಲ್ಲಿ" ಅವಳು ಕೇಳಿದಳು, "ಇದರಲ್ಲಿ ನೀನು ಬೇಡಿದಂಥ

ಬಂಗಾರ, ಹವಳ, ಮುತ್ತು ಇವುಗಳ ಒಡವೆಗಳು ಸಿಕ್ಕುವವು" ಎಂದು ತುಲಸಿದೇವಿ ಹೇಳಿದಳು. ಅವಳು ತುಳಸಿದೇವಿಗೆ ನಮಸ್ಕರಿಸಿ ಪುಟ್ಟಿ, ಗಂಟು ಕರಂಡಕಗಳನ್ನು ತೆಕ್ಕೊಂಡು ಬಹು ವೇಗದಿಂದ ಮನೆಯ ಕಡೆ ಹೊರಟಳು. ಒಂದೆಡೆ ಹಾದಿಯಲ್ಲಿ ಗಿಡದಡಿಯಲ್ಲಿ ಕುಳಿತು ಪುಟ್ಟಿಯೊಳಗಿನ ಹಣ್ಣು ಹಂಪಲ ತಿಂದಳು. ಗಂಟಿನೊಳಗಿಂದ ಸುಂದರವಾದ ವಸ್ತ್ರಗಳನ್ನು ತೆಗೆದು ಉಟ್ಟಳು. ಕರಂಡಕದೊಳಗಿನ ಆಭರಣಗಳನ್ನು ಹಾಕಿಕೊಂಡಳು. ಅವಳು ವನದೇವತೆಯಂತೆ ಕಾಣುತ್ತಿದ್ದಳು.

. ಮನೆಗೆ ಬಂದಳು. ಗಂಡ ಬೆರಗಾಗಿ ನೋಡುತಾ ನಿಂತುಬಿಟ್ಟ. ಇವಳು ಅವನಿಗೆ ಪ್ರೀತಿಯುವಳಾದಳು. ಮತ್ತು ಮೊದಲು ಪ್ರೀತಿಯವಳಿದ್ದವಳು ಅವನಿಗೆ ಬೇಡಾದವಳಾದಳು.

ಒಂದು ದಿನ ಇವಳ ಸವತಿ ಕೇಳಿದಳು, "ನೀನು ಯಾವ ಉಪಾಯಗಳಿಂದ ಈ ರೂಪಲಾವಣ್ಯಗಳನ್ನು ಪಡೆದಿ." ಈ ಗಂಟು, ಈ ಕರಂಡಕ ಯಾರು ಕೊಟ್ಟರು? ನೀನು ಕೈಕೊಂಡ ವ್ರತಗಳಾದರೂ ಯಾವವು? ನಾನು ಪೀಡಿಸಿದ್ದು ಲೆಕ್ಕಿಸಬೇಡ. ಹೇಳು ದಯಮಾಡಿ ಹೇಳು'' ಅಂದಳು. ಹೊಸದಾಗಿ ಗಂಡನ ಪ್ರೀತಿಗಳಿಸಿದವಳು ಬಹಳೀ ಸರಳ ಸ್ವಭಾವದವಳಾಗಿದ್ದಳು. ನಿರ್ಮಲವಾದ ಗಂಗೆಯ ಹಾಗಿದ್ದಳು. ಅವಳು ತಾನು ಮಾಡಿದ್ದನ್ನೆಲ್ಲ ಹೇಳಿದಳು. ಅವಳ ಸವತಿ ಒಂದು ದಿವಸ ಅಡವಿಗೆ ಹೋದಳು. ಅವಳು ತುಳಸಿ ಗಿಡದ ಎಲೆ ತಿಂದಳು ಆದರೆ ನೀರು ಹಾಕಲಿಲ್ಲ. ಹತ್ತಿ ಹರಿದಳು ನೀರು, ಮಣ್ಣು ಹಾಕಲಿಲ್ಲ. ಕಲ್ಲು ಒಗೆದು ಪೇರಲ ಕಾಯಿ ಹಣ್ಣು ಕೆಡವಿ ತಿಂದಳು, ಆದರೆ ನೀರು ಮಣ್ಣು ಹಾಕಲಿಲ್ಲ. ಹಾಗೆ ಮುಂದೆ ಆ ಸರೋವರದ ದಂಡೆಯ ಮೇಲೆ ನಿಂತು ಜೀವ ಕೊಡುವ ನಟನೆ ಮಾಡುತ್ತಾ ನಿಂತಳು. ಆ ಸಾಧು ಅಲ್ಲಿಯೇ ಇದ್ದ. "ಅಮ್ಮಾ ಜೀವ ಕೊಡಬೇಡ'' ಅಂದನು. ಅವಳು ಸುಳ್ಳೇ ಕಂಬನಿ ಸುರಿಸುತ್ತ ಅವನಿಗೆ ಅಂದಳು, "ನನ್ನ ಗಂಡ ನನ್ನನ್ನು ಮೊದಲು ಬಹಳ ಪ್ರೀತಿಸುತ್ತಿದ್ದನು. ಆದರೆ ಈಗ ಅವನು ನನ್ನೊಡನೆ ಸರಿಮಾತು ಆಡುವದಿಲ್ಲ. ನನ್ನನ್ನು ನೋಡಿದರೆ ಅವನಿಗೆ ಅಸಹ್ಯವೆನಿಸುತ್ತದೆ. ಏನು ಮಾಡಬೇಕು ತಿಳಿಯುವಂತಿಲ್ಲ ನನಗೆ. . ಪತಿ ಪ್ರೇಮವಿಲ್ಲದ ಬಾಳು ಹಾಳು, ಹೆಣ್ಣುಮಕ್ಕಳಿಗೆ.

ಸಾಕು ಈ ಜೀವ ನನಗೆ. ನಾನು ಈ ಸರೋವರದಲ್ಲಿ ಹಾರಿ ಜೀವ ಕೊಡುತ್ತೇನೆ.'' ಅಂದಳು.

''ಎಲ್ಲ ಗಂಡಸರು ಮದನನಂತೆಯೇ ಇರುತ್ತಾರೆಯೋ ? ತಾವು ಎಷ್ಟು ಕುರೂಪಿಗಳಾಗಿದ್ದರೂ ಇವರಿಗೆ ಅಪ್ಸರೆಯರೇ ಬೇಕೋ ? ಹಾಗೆ ನೋಡಿದರೆ ನೀನೇನು ಕುರೂಪಿಯಲ್ಲ. ಅದೇನೋ ಇರಲಿ. ನೀನು ಜೀವ ಕೊಡಬೇಡ. ದೇವರನ್ನು ನೆನಿಸಿ ಮೂರಾವರ್ತಿ ಮಾತ್ರ ಈ ನೀರಲ್ಲಿ ಮುಳುಗಿ ಏಳು, ನೀನು ಸುಂದರಾಂಗನೆಯಾಗುವಿ.'' ಎಂದು ಹೇಳಿ ಆ ಸಾಧು ಹೋಗಿಬಿಟ್ಟನು.

ಇವಳಿಗೆ ಅವನಿಗೆ ನಮಸ್ಕಾರ ಮಾಡಬೇಕೆಂದು ಸಹ ಅನಿಸಲಿಲ್ಲ. ಅವಳು ಒಂದಾವರ್ತಿ ನೀರಿನಲ್ಲಿ ಮುಳುಗಿ ಎದ್ದಳು. ಮೊದಲಿಗಿಂತ ಸುಂದರಳಾದಳು. ಎರಡನೇ ಸಾರಿ ನೀರಿನಲ್ಲಿ ಮುಳುಗಿ ಎದ್ದಳು ಮತ್ತಿಷ್ಟು ಚಂದ ಕಾಣಹತ್ತಿದಳು. ಮೂರನೇ ಆವರ್ತಿ ಮುಳುಗಿ ಎದ್ದಮೇಲಂತೂ ಅಪ್ಸರೆಯಂತೆ ಕಂಡಳು. ಸೌಂದರ್ಯದ ಪುತ್ಥಳಿಯೇ ಆದಳು ಅವಳು. ಇನ್ನೊಮ್ಮೆ ಮುಳುಗಿ ಎದ್ದರೆ ಇದಕ್ಕೂ ಹೆಚ್ಚು ಸುಂದರನಾಗುವೆನೆಂದು ತಿಳಿದು ಅವಳು ನಾಲ್ಕನೆ ಆವರ್ತಿ ನೀರಿನಲ್ಲಿ ಮುಳುಗಿ ಎದ್ದಳು. ಆದರೆ ಇದೇನು ಆಶ್ಚರ್ಯ ! ಅವಳ ಲಾವಣ್ಯವೆಲ್ಲ ಅಳಿದು ಹೋದದ್ದು ಕಂಡು ಬಂದಿತು. ಮೂಗು ಮಂಡಾಯಿತು. ಕಾಯವು ಕಪ್ಪಾಯಿತು. ಅವಳು ಹಾಗೆ ಅಳುತ್ತ ಆ ಸಾಧುವಿದ್ದ ಗುಡಿಸಲಕ್ಕೆ ಬಂದಳು. ಅವನ ಕಾಲಿಗೆ ಬಿದ್ದಳು. "ಮಹಾಸ್ವಾಮಿ, ನನ್ನನ್ನು ಕ್ಷಮಿಸಿರಿ. ನೀವು ನನಗೆ ಮೂರಾವರ್ತಿ ಮುಳುಗಲು ಹೇಳಿದಿರಿ. ನಾನು ಮೋಹಕ್ಕೆ ಗುರಿಯಾಗಿ ನಾಲ್ಕನೆ ಆವರ್ತಿ ಮುಳುಗಿದೆ. ಕುರೂಪಿಯಾದೆ. ಮತ್ತೆ ನನ್ನ ರೂಪ ನನಗೆ ದಯಪಾಲಿಸಿರಿ" ಎಂದು ಬೇಡಿಕೊಂಡಳು.

''ಸಾಧು ಅಂದನು ''ಆ ಶಕ್ತಿ ನನ್ನದಲ್ಲ. 'ಅತಿ ಲೋಭೋನ ಕರ್ತವ್ಯಃ' ಎಂದು ಹಿರಿಯರು ಹೇಳಿದ ಮಾತಿದೆ. ಅತಿಯಾಸೆ ಗತಿಗೆಡಿಸುತ್ತಿದೆ. ನೀನು ನನ್ನನ್ನು ನಂಬಲಿಲ್ಲ. ಒಂದು ರೀತಿ ನನ್ನನ್ನೇ ಮೋಸ ಮಾಡಲು ಯತ್ನಿಸಿದಿ. ಅದಕ್ಕೆ ತಕ್ಕ ಫಲ ಉಣ್ಣು ಇನ್ನು.''

ಅವಳು ಸಾಯಲಿಕ್ಕೆ ಬಂದಿದ್ದಿಲ್ಲ. ಜೀವ ಕೊಡುವಷ್ಟು ಧೈರ್ಯವೂ ಇದ್ದಿಲ್ಲ ಅವಳಿಗೆ. "ನನ್ನನ್ನು ಜರಿಯಬಹುದು. ಎರಡೇಟು ಹೊಡೆಯ ಬಹುದು" ಎಂದೆನ್ನುತ್ತ ಮನೆಗೆ ಹೋದಳು. ಹಾದಿಯಲ್ಲಿ ಯಾರೂ ಅವಳನ್ನು ಕರೆಯಲಿಲ್ಲ. ಯಾರೂ ಅವಳಿಗೆ ಪುಟ್ಟಿ ಕೊಡಲಿಲ್ಲ, ಗಂಟೂ ಕೊಡಲಿಲ್ಲ, ಕರಂಡಕವನ್ನೂ ಕೊಡಲಿಲ್ಲ. ಬರೆಗೈ ಬೀಸುತ್ತ, ಕಪ್ಪಾದ ಮೋರೆ ಮಾಡಿಕೊಂಡು ಅವಳು ಬಂದಳು.

ಮನೆಗೆ ಬಂದಾಗ ಯಾರೂ ಅವಳ ಗುರ್ತು ಹಿಡಿಯಲಿಲ್ಲ. ಅವಳು ಕಣ್ಣೀರು ಸುರಿಸಹತ್ತಿದಳು. ಅವಳು ತನ್ನ ಸವತಿಗೆ ಅಂದಳು "ನೀವು ನನ್ನನ್ನು ಗುರ್ತಿಸಲಿಲ್ಲವೇ? ನಾನು ನಿಮ್ಮನ್ನು ಪೀಡಿಸಿದ ನಿಮ್ಮ ಸವತಿ. ಮತ್ತೆ ಗಂಡನಿಗೆ ಬೇಕಾದವಳಾಗಬೇಕೆಂದು, ಗಂಡನ ಪ್ರೀತಿ ಸಂಪಾದಿಸ ಬೇಕೆಂದು ಅಡವಿ ಸೇರಿದ್ದೆ. ಮೂರಾವರ್ತಿ ಮುಳುಗಿ ಎದ್ದು, ಅತಿ ಲೋಭ ದಿಂದ ಮತ್ತೊಮ್ಮೆ ನೀರಿನಲ್ಲಿ ಮುಳುಗಿದೆ. ಅದರ ಫಲವನ್ನೇ ಉಣ್ಣು ತ್ತೇನೆ ಈಗ. ನನ್ನ ರೂಪವೆಲ್ಲ ಅಡಗಿತು. ನನಗೆ ನೀವೆಲ್ಲರೂ ಕ್ಷಮಿಸಿರಿ. ಆದದ್ದೆಲ್ಲ ಮರೆತು ಬಿಡಿರಿ."

ಆಗ ಈಗ ಪ್ರೀತಿಗೆ ಪಾತ್ರಳಾದ ಅವಳ ಸವತಿ ಅವಳಿಗಂದಳು "ಇರಲಿ ತಾಯಿ. ಈ ಮನೆ ನಮ್ಮಿಬ್ಬರದು. ನಾನೇನು ನಿನ್ನನ್ನು ಪೀಡಿ ಸುವದಿಲ್ಲ. ನನಗಾದ ದುಃಖ ನಿನಗಾಗಬಾರದು. ಆದದ್ದಾಯಿತು. ಅಳ ಬೇಡ. ನಾವಿಬ್ಬರೂ ಆನಂದದಿಂದ ಬಾಳುವಾ."

ಮತ್ತು ಅವರು ನಿಜವಾಗಿಯೂ ಆನಂದದಿಂದ ಬಾಳಿದರು.



# ಮೂರು ಗಡಿಗೆಗಳು.

## ೧.

ಒಂದು ಊರಲ್ಲಿ ಒಬ್ಬ ಮನುಷ್ಯನಿದ್ದನು. ಅವನ ಹೆಸರು ತಿರಕಂಭಟ್ಟ. ಅವನು ಬಡವನಿದ್ದನು. ಅವನ ಕುಟುಂಬ ದೊಡ್ಡದಿತ್ತು. ಅವನಿಗೆ ನಾಲ್ಕು ಮಕ್ಕಳಿದ್ದವು. ಅವನ ಹೆಂಡತಿಯ ಹೆಸರು ಸರಸ್ವತಿಬಾಯಿ. ಮನೆಯಲ್ಲಿ ಯಾವಾಗಲೂ ಅನ್ನದ ಕೊರತೆ, ಕೂಳಿನ ಅಭಾವ. ಗಂಡ ಹೆಂಡರ ನ್ಯಾಯ ಇದ್ದದ್ದೆ. ನ್ಯಾಯ ನಡೆದಾಗ ಹುಡುಗರು ಅಳುತ್ತಿದ್ದರು. ಆದರೆ ನೆರೆಹೊರೆಯವರು ನ್ಯಾಯ ಕೇಳಿ ನಗುತ್ತಿದ್ದರು ಮತ್ತು ಮೌಜು ಮಾಡುವರು.

ಒಂದು ದಿನ ಗಂಡ ಹೆಂಡರ ನ್ಯಾಯ ಒಳ್ಳೇ ರಭಸದಿಂದ ನಡೆಯಿತು. ತಿರಕಂಭಟ್ಟರು ಹೊರಗೆ ಕಟ್ಟೆಯ ಮೇಲೆ ಕೂತಿದ್ದರು. ಒಳಗೆ ಮಕ್ಕಳು ತಿನ್ನಲಿಕ್ಕೆ ತಾಯಿಯ ಹತ್ತರ ಬೇಡುತ್ತಿದ್ದವು. ತಾಯಿ ರೊಚ್ಚಿಗೆದ್ದು ಕಟ್ಟೆಯ ಮೇಲೆ ಬಂದು ಗರ್ಜಿಸಿದಳು "ಮನೆಯಲ್ಲಿ ಒಂದು ಕಾಳು ಧಾನ್ಯವಿಲ್ಲ. ಏನು ಕೊಡಲಿ ಈ ಹುಡುಗರಿಗೆ? ಕಟ್ಟೆಯ ಮೇಲೆ ಯಲೆ ಅಡಿಕೆ ಹಾಕಿ ಪಿಚಿ ಪಿಚಿ ಉಗುಳುತ್ತ ಕೂಡುವುದೊಂದೆ ನಿಮಗೆ ಗೊತ್ತು. ಎರಡನೇ ಉದ್ಯೋಗವೇ ಇಲ್ಲ ನಿಮಗೆ. ಸ್ವಲ್ಪಾದರೂ ನಾಚಿಕೆ ಇಲ್ಲ. ಎರಡನೆಯವರಲ್ಲಿ ಹೋಗಿ ಬೇಡಿ ಸಾಕಾಗಿದೆ ನನಗೆ. ಈ ಹುಡುಗರೆಲ್ಲರನ್ನು ಭಾವಿಯಲ್ಲಿ ಒಗೆದು ಬಿಡಿರಿ. ಹೊರಗೆ ಹೋಗಿ ಏನಾದರೊಂದು ಉದ್ಯೋಗ ಮಾಡಿ ಗಳಿಸಿರೆಂದು ನೂರು ಸಾರೆ ಹೇಳಿದೆ ನಿಮಗೆ. ಸಾಕಾಯಿತು ಈ ಸಂಸಾರ ನನಗೆ."

ಸರಸ್ವತಿಬಾಯಿಯ ಮಾತು ಹಾಗೇ ನಡವೇ ಇತ್ತು. ಪಾಪ! ತಿರಕಂಭಟ್ಟ. ಅವನಿಗೆ ನೌಕರಿಯಾದರೂ ಯಾರು ಕೊಡಬೇಕು. ಅವನಿಗೆ ಯಾವ ಕೆಲಸವೂ ಸಿಗುತ್ತಿರಲಿಲ್ಲ. ಇಂದು ಮಾತ್ರ ಅವನಿಗೆ ಈ ಮಾತು [illegible] ಬಹಳ ವ್ಯಸನವಾಯಿತು. ಅವನ ಸ್ವಾಭಿಮಾನವು ಜಾಗೃತವಾಯಿತು. ಅವನು ಒಮ್ಮೆಲೆ ಎದ್ದನು, "ಎದ್ದೆ, ನಾನು ಇವತ್ತು ಮನೆ

ಬಿಟ್ಟು ಹೊರಗೆ ಹೋಗುತ್ತೇನೆ. ಏನಾದರೂ ಗಳಿಸಿ ತಿರುಗಿ ಬರುತ್ತೇನೆ. ಮಡದಿ ಮಕ್ಕಳಿಗೆ ಹೊಟ್ಟೆಗೆ ಹಾಕಲು ಸಮರ್ಥನಾಗಿ ತಿರುಗಿ ಬರುತ್ತೇನೆ ಇಲ್ಲದಿದ್ದರೆ ಇದೇ ನಮ್ಮ ಕೊನೆಯ ಭೆಟ್ಟಿ" ಅಂದನು. ಈ ಮಾತು ಕೇಳಿ ಭಟ್ಟರ ಹೆಂಡತಿಗೆ ಅಷ್ಟು ಸಂತೋಷವಾಗಲಿಲ್ಲ. ಅವರನ್ನು ರೊಚ್ಚಿಗೆಬ್ಬಿಸ ಬೇಕೆಂದು ಅವಳು ಮತ್ತೆ ಅಂದಳು "ಗೊತ್ತಿದೆ ನಿಮ್ಮ ಪ್ರತಿಜ್ಞೆ ನನಗೆ. ಇಪ್ಪತ್ತು ಸಾರೆ ಈ ಮಾತು ಕೇಳಿದ್ದೇನೆ ನಿಮ್ಮಿಂದ. ಇನ್ನೂ ಅಂಗಳದಲ್ಲಿ ಕಾಲು ಇಟ್ಟಿಲ್ಲ ನಿಜವಾಗಿ ಹೊರಬಿದ್ದಾಗ ಇದೆಲ್ಲ ಖರೆ ಮಾತು."

ತಿರಕಂಭಟ್ಟನು ಹೊರಬಿದ್ದನು. ಕಾಲು ಒಯ್ದಲ್ಲೆ ನಡೆದ. ದೂರ ಹೋದ. ಆದರೆ ಹೋಗುವದಾದರೂ ಎಲ್ಲಿ? ಅವನ ಗುರುತಿನವರು ಯಾರೂ ಇರಲಿಲ್ಲ. ದಣಿಯುವವರೆಗೆ ನಡೆದಾ. ಆ ಮೇಲೆ ಒಂದು ಗಿಡ ದಡಿಯಲ್ಲಿ ಅಳುತ್ತ ಕೂತ.

ಅದೇ ಸಮಯಕ್ಕೆ ಶಂಕರ ಪಾರ್ವತಿಯರು ಆ ಹಾದಿಯ ಗುಂಟ ನಡೆದಿದ್ದರು. ಪಾರ್ವತಿ ಶಂಕರನಿಗಂದಳು "ಯಾರೋ ಅಳುತ್ತಾರೆ. ಯಾರೋ ದುಃಖದಿಂದ ಪೀಡಿತವಾದ ಪ್ರಾಣಿ ಇರಬೇಕು. ನಡೆ ನೋಡುವಾ" ಅಂದಳು. ಅವರಿಬ್ಬರು ಅತ್ತಿತ್ತ ನೋಡುತ್ತ ಗಿಡದ ಬುಡದಲ್ಲಿ ಕುಳಿತ ತಿರಕಂಭಟ್ಟನನ್ನು ನೋಡಿದರು.

"ಅಗೋ, ನೋಡಿದರಾ ಆ ದುಃಖದಿಂದ ಬಳಲುವ ಪ್ರಾಣಿ. ನಡೆ ಯಿರಿ ಯಾಕೆ ಅಳುತ್ತಾನೆ ಅವನನ್ನು ಕೇಳುವಾ" ಅಂದಳು ಪಾರ್ವತಿ.

ಭಗವಾನ್ ಶಂಕರ ಅಂದ "ಈ ಜಗತ್ತಿನಲ್ಲಿದ್ದ ಜನರು ಅಳುವದು ಒಂದೇ ವಸ್ತುವಿಗಾಗಿ. ಇವರಿಗೆ ಬೇಕಾದದ್ದು ದುಡ್ಡು. ಇವರಿಗೆಲ್ಲ ಕೊಟ್ಟು ನಾನು ಬಡವನಾದೆ ಇನ್ನು ಕೊಡಲಿಕ್ಕೆ ನನ್ನಲ್ಲಿಯಂತೂ ಏನೂ ಇಲ್ಲ. ಸ್ವಲ್ಪ ಭಸ್ಮವಿದೆ. ಅದನ್ನು ಕೊಡಲ್ಯಾ?"

ಪಾರ್ವತಿ ಅಂದಳು, "ದೇವಾ, ನಮ್ಮ ಕಡೆಗೆ ಇನ್ನೂ ಮೂರು ಗಡಿಗೆ ಗಳಿವೆ. ಅವು ಇರುವವರೆಗೆ ಏನು ಕೊಡಬೇಕೆಂಬ ಮಾತೇ ಇಲ್ಲ. ನಡೆಯಿರಿ ಕೇಳುವಾ ಆ ಬಡ ಬ್ರಾಹ್ಮಣನಿಗೆ ದುಃಖದಿಂದ ಬಳಲುವವ ರನ್ನು ನೋಡಿದರೆ ನನಗೆ ಸಹನವಾಗುವದಿಲ್ಲ."

ಭಗವಾನ ಶಂಕರನು, "ನೀನು ಪರ್ವತರಾಜನ ಮಗಳೆಂದು ನಿನಗೆ ಪಾರ್ವತಿ ಅನ್ನುತ್ತಾರೆ. ಆದರೆ ನಿನ್ನ ಕರುಳು ಪರ್ವತದಂತಿಲ್ಲ, ಬೆಣ್ಣೆಯಂತೆ ಇದೆ ಅಲ್ಲಾ !"

ಪಾರ್ವತಿ ಅಂದಳು, ''ದೇವಾ ನನ್ನ ತಂದೆ ಹಿಮಾಲಯನೇನು ಕಠೋರನಲ್ಲ. ಅವನ ಹೊಟ್ಟೆಯಲ್ಲಿ ಅಲ್ಲವೆ ಸಿಂಧೂ, ಗಂಗಾ, ಯಮುನಾ, ಬ್ರಹ್ಮಪುತ್ರಾ ಮೊದಲಾದ ನೂರಾರು ನದಿಗಳು ಹುಟ್ಟಿದ್ದು. ನನ್ನ ತಂದೆಯ ಹೃದಯ ದಯೆಯಿಂದ ತುಂಬಿ ತುಳುಕುತ್ತದೆ. ಅದಿರಲಿ. ಈ ಬಡ ಪ್ರಾಣಿಯನ್ನು ನೋಡುವಾ. ಅವನ ಕಂಬನಿಗಳನ್ನು ಒರಿಸುವಾ ನಡೆಯಿರಿ."

ಅವರಿಬ್ಬರು ತಿರಕಂಭಟ್ಟರ ಹತ್ತಿರ ಬಂದರು, "ಯಾಕಯ್ಯಾ, ಬಡ ಬ್ರಾಹ್ಮಣಾ ನೀನು ಇಲ್ಲಿ ಕೂತು ಅಳುವದು ?'' ಶಂಕರನು ವಿಚಾರಿಸಿದನು. ಬ್ರಾಹ್ಮಣನು ದೊಡ್ಡ ದನಿಯಿಂದ ಅಳುತ್ತ ಅಂದನು "ಬಡತನ ನನ್ನ ಬೆನ್ನು ಹತ್ತಿದೆ. ಮನೆಯಲ್ಲಿ ಮಡದಿ ನಾಲ್ಕು ಮಕ್ಕಳು. ಮನೆಯಲ್ಲಿ ಒಂದು ಕಾಳಿಲ್ಲ. ಅವರಿಗೆ ತಿನ್ನಲಿಕ್ಕೆ ಏನು ಕೊಡಲಿ ? ಅವರ ಉಪವಾಸ, ವನವಾಸ ನಾನು ನೋಡಲಾರದೇ ಇಲ್ಲಿ ಬಂದು ಕೂತಿದ್ದೇನೆ.''

ಭಗವಾನ ಶಂಕರನು ಅಂದನು, ''ನಾವು ಜಡವರಾಗಿದ್ದೇವೆ. ನಮ್ಮ ಹತ್ತರ ಮೂರು ಗಡಿಗೆಗಳು ಮಾತ್ರ ಇವೆ. ಒಂದನ್ನು ನಿನಗೆ ಕೊಡುತ್ತೇವೆ."

"ಈ ಬರಿಯಮಾನ ಗಡಿಗೆ ತಕ್ಕೊಂಡು ನಾನು ಏನು ಮಾಡಲಿ. ನನ್ನಲ್ಲಿ ದೊಡ್ಡ ತಾಮ್ರ, ಹಿತ್ತಾಳಿ ಪಾತ್ರೆಗಳಿಲ್ಲದಿದ್ದರೂ ಹತ್ತಿಪ್ಪತ್ತು ಗಡಿಗೆಗಳಿವೆ. ಏನು ಗಡಿಗೆಗಳಲ್ಲಿ ನನಗಾದ ದುಃಖವನ್ನು ತುಂಬಲಿಯಾ ಏನು ಕಣ್ಣೀರನ್ನು ಅವುಗಳಲ್ಲಿ ಸುರಿಸಲಿಯಾ ?'' ಅಂದನು ತಿರಕಂಭಟ್ಟನು.

"ಅಲ್ಲ ಭಟ್ಟರೆ, ಈ ಗಡಿಗೆ ಮಂತ್ರಿಸಿದ್ದು ಅದೆ. ಬೀಳು ಬೀಳು ಎಂದೊಡನೆ ಇದರೊಳಗಿಂದ ಬೇಕಾದಷ್ಟು ಚೂರಮುರಿ ಪುಠಾಣಿ ಹೊರ ಬೀಳುತ್ತವೆ. ನೀನು ಒಂದು ಚೂರಮುರಿ ಪುಠಾಣಿಯ ಅಂಗಡಿಯನ್ನು ಹಾಕು. ಜನ ನಿನ್ನ ಅಂಗಡಿಗೆ ಮುಕ್ಕರುವದು. ಬಂದ ದುಡ್ಡಿನಿಂದ ನೀನು ನಿನ್ನ ಹೆಂಡತಿ ಮಕ್ಕಳು ಸುಖದಿಂದ ಬಾಳಿರಿ.'' ಎಂದನು ಭಗವಾನ ಶಂಕರನು.

ತಿರಕಂಭಟ್ಟನಿಗೆ ಆನಂದವಾಯಿತು. ಪ್ರತ್ಯಕ್ಷ ಶಂಕರ ಪಾರ್ವತಿಯೇ ಅವರು ಎಂಬುವದು ಅವನಿಗೆ ತಿಳಿಯಲಿಲ್ಲ. ನಮಸ್ಕಾರ ಮಾಡಿ ಅವನು ಮನೆಯ ಕಡೆ ಸಾಗಿದನು. ಹಾದಿಯಲ್ಲಿ ಒಂದು ಊರಲ್ಲಿ ಉಳಿಯಬೇಕಾಯಿತು. ಅಲ್ಲಿ ಒಂದು ಶೆಟ್ಟರ ಅಂಗಡಿ ಇತ್ತು. "ಶೆಟ್ಟರೆ ಈ ಗಡಿಗೆಯೆಂದರೆ ನನ್ನ ಪ್ರಾಣ. ಇದನ್ನು ನಿಮ್ಮ ಹತ್ತಿರ ಸುರಕ್ಷಿತವಾಗಿ ಇಡಿರಿ. ನಾನು ನದಿಗೆ ಹೋಗಿ ಜಳಕ ಮಾಡಿ ಬರುವೆ" ಎಂದು ಹೇಳಿ ತಿರಕಂಭಟ್ಟನು ನದಿಗೆ ಹೋದ. ಇತ್ತ ಶೆಟ್ಟರಿಗೆ ಅನಿಸಿತು "ಇಷ್ಟು ಕಾಳಜಿ ವಹಿಸಬೇಕಾದರೆ ಈ ಗಡಿಗೆಯಲ್ಲಿ ಏನಾದರೂ ಗುಪಿತವಿರಬೇಕು" ಹೀಗೆಂದು ಅವರು ಒಳಗೆ ನೋಡಿದರು. ಅದರಲ್ಲಿ ಏನೂ ಇದ್ದಿಲ್ಲ. ಸಹಜ ಅದನ್ನು ಅಗಳಾಡಿಸಿದರು ಮತ್ತು ಬಾಯಿಂದ ಅಕಸ್ಮಾತ್ತಾಗಿ ಬೀಳು ಬೀಳು ಎಂಬ ಶಬ್ದ ಹೊರಟವು. ಚೂರಮರಿಯ ರಾಶಿಯೇ ಬಿದ್ದಿತು ಅಲ್ಲಿ. ಶೆಟ್ಟಿಯ ಬಾಯಿಗೆ ನೀರು ಬಿಟ್ಟಿತು. "ಏನೇ, ಇಲ್ಲಿ ಬಾರೆ. ಈ ಗಡಿಗೆಯಂಥ ಗಡಿಗಿ ಮನೆಯಲ್ಲಿ ಅದೇನೆ?" ಎಂದ ಹೆಂಡತಿಗೆ. "ಅವೆ" ಅಂದಳು. "ತಾರೆ! ಲಗು ತಾರೆ" ಅಂದ ಶೆಟ್ಟಿ. ಹೆಂಡತಿ ಗಡಿಗಿ ತಂದಿಟ್ಟಮೇಲೆ, ಭಟ್ಟರ ಗಡಿಗೆ ಒಳಗೆ ಇಡಲು ಹೇಳಿ, ತನ್ನ ಮನೆಯಲ್ಲಿಯ ಗಡಿಗಿ ಭಟ್ಟರಿಟ್ಟ ಗಡಿಗೆಯ ಸ್ಥಳದಲ್ಲಿಟ್ಟ. ತಿರಕಂಭಟ್ಟನು ಸ್ನಾನಮಾಡಿ ಬಂದು "ಶೆಟ್ಟರೆ ನನ್ನ ಗಡಿಗಿ ಸುರಕ್ಷಿತ ಅದೆಯಲ್ಲಾ?" ಅಂದರು. "ಏನು ಭಟ್ಟರೆ, ನಿಮ್ಮ ಗಡಿಗೆ ಏನು ಬಂಗಾರದ್ದೊ, ಯಾರಾದರೂ ಕೈ ಹಚ್ಚಲಿಕ್ಕೆ" ಅಂದನು ಶೆಟ್ಟಿ. ಭಟ್ಟರು ಗಡಿಗೆ ತಕ್ಕೊಂಡು ಭರದಿಂದ ಮನೆಗೆ ಹೋದರು. ಹಾದಿಯಲ್ಲಿ ಹೋಗುವಾಗ್ಗೆ ಇನ್ನು ತಾನು ಶ್ರೀಮಂತನಾಗುವೆ, ಮಹಲಿನ ಮನೆ ಕಟ್ಟುವೆ, ಮಡದಿ ಮಕ್ಕಳಿಗೆ ಬಟ್ಟೆ ದಾಗೀನೆ ಹಾಕುವೆ ಹೀಗೆ ವಿಚಾರ ಮಾಡುತ್ತ ಹೊರಟರು. ದಾರಿ ತೀರಿದ್ದು ತಿಳಿಯಲಿಲ್ಲ. ಮನೆಯ ಇದುರು ಬಂದು ಬಾಗಿಲ ಬಡೆದರು. ಸರಸ್ವತಿ ಬಾಯಿ ಬಾಗಿಲು ತೆಗೆದಳು. ಗಂಡನ ಸವಾರಿ ಇದ್ದದ್ದು ಕಂಡಳು!

"ಗೊತ್ತು ನನಗೆ. ಬರಿಗೈಲೆ ತಿರುಗಿ ಬಂದಿರಿ ಹೌದಲ್ಲೊ. ನೀವು ಹೊರಗೆ ಇರುವದು ಒಂದು ದಿನ, ಎರಡು ದಿನ; ಮೊದಲೇ ನಾನು ತಿಳಕೊಂಡಿದ್ದೆ ಇದನ್ನು" ಅಂದಳು ಹೆಂಡತಿ.

"ಹಾಗೆ ಬಂದಿಲ್ಲ. ನಾನು ಗಡಿಗೆ ತಂದಿದ್ದೇನೆ" ಭಟ್ಟರು ಅಂದರು.

"ಗಡಿಗೆ ತರಲಿಕ್ಕೆ ಮನೆಯಲ್ಲಿ ಗಡಿಗೆಗಳು ಇಲ್ಲವೋ" ಅಂದಳು ಹೆಂಡತಿ.

"ಹೆಂಗಸರ ಸ್ವಭಾವವೇ ಉತಾವಳಿ. ಸ್ವಲ್ಪ ತಾಳ್ಮೆಯಿಂದ ಕೇಳು. ಮನೆಯೊಳಗೆ ಕಾಲಿಡುವವರೊಳಗಾಗಿಯೇ ಸುರುವಾಯಿತೇ ತೋಫಿನ ಸುರಿಮಳೆ" ಅಂದರು ಭಟ್ಟರು. ಸರಸ್ವತಿ ಬಾಯಿ ಸಿಟ್ಟಿಗೆದ್ದು ಅಂದರು, "ಈಗ ಹತ್ತು ವರುಷ ನಿಮ್ಮೊಡನೆ ಪ್ರಪಂಚ ಮಾಡಿದ್ದು ತಾಳ್ಮೆಯಿಲ್ಲದೇನೆ? ಮಕ್ಕಳಿಗೆ ಹೊಟ್ಟೆಗಿಲ್ಲ, ಬಟ್ಟೆ ಇಲ್ಲ. ಇದನ್ನೆಲ್ಲ ಇಷ್ಟು ದಿನ ನಾನು ಸಹನ ಮಾಡಿದೆ. ಮತ್ತೆ ನನಗೇ ತಾಳ್ಮೆಯಿಲ್ಲವಂತೆ. ಗಂಡಸರಿಗಿಂತ ಹೆಂಗಸರೇ ಹೆಚ್ಚು ಸಹನಶೀಲರು ಅನ್ನುವದು ಮರೆಯಬೇಡಿರಿ. ಅಗಸ್ತ್ಯಋಷಿ ಏಳು ಸಮುದ್ರ ಕುಡಿದಿರಬಹುದು. ಆದರೆ ನಾವು ಹೆಣ್ಣುಮಕ್ಕಳು ದುಃಖ ಕಷ್ಟ ,ಅವಮಾನ ಮುಂತಾದ ನೂರಾರು ಸಮುದ್ರ ಕುಡಿದಿರುತ್ತೇವೆ. ತಾಳ್ಮೆಯಿಲ್ಲದಿದ್ದರೆ ನಾನು ಜೀವ ಬಿಟ್ಟು ಎಷ್ಟೋ ದಿನವಾಗುತ್ತಿದ್ದವು.

"ಓಹೋ! ಎಷ್ಟು ಚಂದ ನಿನ್ನ ಮಾತು. ಪುರಾಣ ಹೇಳುವವಳಾಗಿ ಬಿಟ್ಟೆಯಲ್ಲಾ. ನೆಟ್ಟಗಾಯಿತು. ನನ್ನದು ಮಕ್ಕಳ ಹೊಟ್ಟೆ ತುಂಬಲಿಕ್ಕೆ ಅಡ್ಡಿಯಿಲ್ಲ." ಭಟ್ಟರು ಅಂದರು.

"ಮನೆಯ ಪುರಾಣ ತೀರಿದರೆ ವೇಳೆ ಸಿಕ್ಕಬೇಕು ನನಗೆ" ಅಂದಳು ಸರಸ್ವತಿಬಾಯಿ.

"ಇರಲಿ. ಇದು ಅಂಥ ಇಂಥ ಗಡಿಗೆ ಅಲ್ಲ. ಮಂತ್ರಿಸಿದ್ದು ಇದೆ. ಇದರೊಳಗಿಂದ ಚೂರಮರಿ ಫುಠಾಣಿಯ ಅಖಂಡ ಪ್ರವಾಹವೇ ಸುರುವಾಗುತ್ತದೆ. ನಾವು ಒಂದು ಅಂಗಡಿ ಹಾಕುವ, ದುಡ್ಡು ಗಳಿಸುವ. ಆಮೇಲೆ ನಿನ್ನನ್ನು ಬಂಗಾರದ ದಾಗೀನೆಗಳಿಂದ ತುಂಬಿಬಿಡತೇನೆ" ಅಂದರು ಭಟ್ಟರು.

ಸರಸ್ವತಿಬಾಯಿಯು ನಕ್ಕು ಅಂದಳು. "ನಿಮಗೇನು ಹುಚ್ಚು ಹಿಡಿದಿದೆಯೋ? ಗಡಿಗಿಯೊಳಗಿಂದ ಚೂರಮರಿ ಫುಠಾಣಿ ಬೀಳುವವೋ"

"ನಡೆ, ಚೀಲ ತಕ್ಕೊಂಡು ಬಾ. ಪ್ರತ್ಯಕ್ಷ ನಿನಗೆ ತೋರಿಸಿಬಡು ತ್ತೇನೆ." ಅಂದರು ಭಟ್ಟರು. ಚೀಲ ತಂದಾಯಿತು. "ಬೀಳು ಬೀಳು" ಅನ್ನುತ್ತ ಭಟ್ಟರು ಗಡಿಗಿ ಅಗಳಾಡಿಸಿದ್ದು ಆಯಿತು. ಒಂದು ಕಾಳು ಸಹ ಬೀಳಲಿಲ್ಲ. "ಎಷ್ಟು ಹೊತ್ತು ಹೀಗೆ ನೀವು ಕುಣಿದಾಡುವದು?" ಎಂದು ಸಿಟ್ಟಿಗೆದ್ದು ಸರಸ್ವತಿಬಾಯಿ ಅಂದಳು. "ಇಡಿರಿ ಗಡಿಗಿ ಕೆಳಗೆ. ಬೆವೆತು ನೀರಾಗಿದ್ದೀರಿ" ಎಂದು ನಕ್ಕಳು.

ತಿರಕಂಭಟ್ಟ ನಗಲಿಲ್ಲ. ಶೆಟ್ಟಿ ತನಗೆ ಮೋಸ ಮಾಡಿದಾ ಅನ್ನುವದು ಅವನಿಗೆ ಹೊಳೆಯಿತು. ಆ ಗಡಿಗಿ ಕೈಯಲ್ಲಿ ಹಿಡಿದು ಮನೆ ಹೊರಗೆ ಬಿದ್ದಾ. ಅಳುವ ಮಕ್ಕಳಿಗೆ ಸರಸ್ವತಿಬಾಯಿ ಸಮಾಧಾನ ಮಾಡಿದಳು.

ರಾತ್ರಿ ಭಟ್ಟರು ಹಾಗೇ ಹೊರಟರು. ಬೆಳಕು ಹರಿಯುವ ಕಾಲಕ್ಕೆ ಶೆಟ್ಟರ ಅಂಗಡಿಗೆ ಬಂದರು. "ಶೆಟ್ಟರೆ, ನನ್ನ ಗಡಿಗೆ ನೀವು ಕಳವುಮಾಡಿ ದ್ದೀರಿ. ನೀವು ಕೊಟ್ಟ ಗಡಿಗೆ ನನ್ನದಲ್ಲ. ನೀವು ಬದಲು ಮಾಡಿದ್ದೀರಿ. ನನ್ನ ಗಡಿಗೆ ನನಗೆ ಕೊಡಿರಿ" ಅಂದರು ಭಟ್ಟರು.

ಶೆಟ್ಟಿ ಸಿಟ್ಟಿಗೆದ್ದು ಭಟ್ಟರ ಮೈಮೇಲೆ ಏರಿ ಹೋಗಿ, "ನಿನ್ನ ಗಡಿಗೆ ತಗೊಂಡು ನನಗೇನು ಮಾಡುವದದೆ? ನಾನೇನು ಕಳ್ಳನೋ, ಸುಳ್ಳನೋ, ತಿರುಕನೊ? ಸುಮ್ಮನೆ ಹೋಗು ಇಲ್ಲದಿದ್ದರೆ ಕಪಾಳ ಗಡ್ಡಿಗೆ ಕೊಡುವೆ, ನೋಡು" ಅಂದನು.

ಈ ಗದ್ದಲ ಕೇಳಿ, ಆಜುಬಾಜು ಮಂದಿ ಅಲ್ಲಿ ಕೂಡಿದರು. ಎಲ್ಲರೂ ತಿರಕಂಭಟ್ಟನನ್ನು ಜರಿದರು ಮತ್ತು ಅವನನ್ನು ಚಂಡು ಹಿಡಿದು ನುಗಿಸಿ ಕಳಿಸಿದರು. ಬಡ ಬ್ರಾಹ್ಮಣ ಅಳುತ್ತ ಮತ್ತೆ ಆ ಗಿಡದ ಬುಡದಲ್ಲಿ ಬಂದು ಕೂತ.

ಶಂಕರ ಪಾರ್ವತಿಯರು ಅಲ್ಲಿಂದ ಹೊರಟಿದ್ದರು. ಅವನು ಅಳುವ ಸ್ವರ ಪಾರ್ವತಿ ದೇವಿಗೆ ಕೇಳಿಸಿತು. "ದೇವಾ, ಯಾವುದೋ ಒಂದು ಪ್ರಾಣಿ ಅಳುತ್ತಿದೆ. ನಡೆಯಿರಿ ನೋಡುವಾ" ಎಂದು ಶಂಕರನು ಅಂದನು "ಸಾಕು, ಈ ಜಗತ್ತಿನಲ್ಲಿ ಎಲ್ಲರೂ ಮರುಗುವವರೆ ಮತ್ತು ಅವರ ಮರುಗು ಇಲ್ಲದಂತೆ ಮಾಡುವುದೊಂದೇ ಉದ್ಯೋಗ ನಿನ್ನದೆಂದು ನನಗೆ ಅನಿಸುತ್ತದೆ

ಈ ಗೋಳು ನೋಡಿ ಸಾಕಾಗಿದೆ ನನಗೆ. ನಮ್ಮ ಕಡೆ:ಾದರು ಏನು ಉ:ಿದಿದೆ ಇನ್ನು.''

''ಇನ್ನೂ ಎರಡು ಗಡಿಗೆಗಳು ಉಳಿದಿವೆ. ಅಲ್ಲಿಯವರೆಗೇಕೆ ಚಿಂತೆ? ನಡೆಯಿರಿ ಆ ಬಡ ಪ್ರಾಣಿಯ ಹತ್ತಿರ ಹೋಗೋಣ'' ಅಂದಳು ದೇವಿ.

ಆ ಗಿಡದ ಹತ್ತಿರಬಂದರು. ಮತ್ತೆ ಅದೇ ಬಡಬ್ರಾಹ್ಮಣ ಇದ್ದ. ''ಯಾಕೆ ಭಟ್ಟರೆ, ಮತ್ತೇನು ಸಮಾಚಾರ'' ಅಂದನು ಶಂಕರ. ಭಟ್ಟರು ಅಳಲಿಕ್ಕೆ ಹತ್ತಿ ''ಏನು ಹೇಳಲಿ ಮಹಾರಾಯಾ, ಒಬ್ಬ ಶೆಟ್ಟಿಯಲ್ಲಿ ನೀವು ಕೊಟ್ಟ ಗಡಿಗೆ ಇಟ್ಟಿದ್ದೆ. ಅವನು ಅದನ್ನು ಬದಲಾಯಿಸಿ, ನನ್ನ ಗಡಿಗೆ ನನಗೆ ಕೊಡವಲ್ಲ. ಹೋಗಿ ಕೇಳಿದರೆ ನೆರೆಹೊರೆಯವರನ್ನು ಕೂಡಿಸಿ ಆತನು ನನ್ನನ್ನು ಬಡಿದು ಕಳಿಸಿದ. ಅದಕ್ಕೆ ಮತ್ತೆ ಈ ಗಿಡದ ಬ:ಗದಲ್ಲಿ ಬಂದು ಕೂತಿದ್ದೇನೆ'' ಅಂದರು. ''ಹಾಗಾದರೆ ತಗೋ ಈ ಗಡಿಗೆ'' ಅಂದು ಮತ್ತೊಂದು ಗಡಿಗೆ ಕೊಟ್ಟನು ಶಂಕರನು. ''ಏನಿದೆ ಇದರಲ್ಲಿ?'' ಭಟ್ಟರು ಕೇಳಿದರು. ''ಬೀಳು, ಬೀಳು'' ಅಂದಕೂಡಲೇ ಇದರೊಳಗಿಂದ ರಾಕ್ಷಸರು ಹೊರಬೀಳುತ್ತಾರೆ. ''ಶಿವ ಶಿವ'' ಎಂದೊಡನೆ ಅದೃಶ್ಯರಾಗುತ್ತಾರೆ. ಈ ಗಡಿಗೆ ತಕ್ಕೊಂಡು ಹೋಗಿ ಶೆಟ್ಟಿಯ ಸೇಡು ತೀರಿಸು ಎಂದು ಹೇಳಿದನು ಶಂಕರನು.

ಬ್ರಾಹ್ಮಣ ಮಾತಿನ ಮರ್ಮ ತಿಳಿದುಕೊಂಡ. ನಮಸ್ಕಾರ ಮಾಡಿ ಗಡಿಗೆ ತಕ್ಕೊಂಡು ಶೆಟ್ಟರ ಊರಿಗೆ ಬಂದ. ''ಶೆಟ್ಟರೆ, ನನ್ನ ಗಡಿಗೆ ನನಗೆ ಸಿಕ್ಕಿತು. ನಾನು ಸುಮ್ಮನೆ ನಿಮಗೆ ಕೆಟ್ಟ ಮಾತು ಆಡಿದೆ. ಕ್ಷಮಿಸಿರಿ ನನಗೆ ಸ್ವಲ್ಪ ಈ ಗಡಿಗೆ ಸಂಭಾಳಿಸಿರಿ. ಈಗ ನಾನು ಜಳಕ ಮಾಡಿ ಬರುತ್ತೇನೆ'' ಅಂದರು ಭಟ್ಟರು.

ಬ್ರಾಹ್ಮಣ ನದಿಗೆ ಹೋದ. ಇತ್ತ ಶೆಟ್ಟಿ ಗಡಿಗೆಯಲ್ಲಿ ಏನಿದೆ ಎಂಬ ಕುತೂಹಲದಿಂದ ಅದನ್ನು ಅಗಳಾಡಿಸಿ 'ಬೀಳು, ಬೀಳು' ಅಂದನು. ಕೂಡಲೆ ಡೊಣ್ಣೆಹಿಡಿದ ರಾಕ್ಷಸರು ಹೊರಬಿದ್ದು, ಶೆಟ್ಟರ ಮತ್ತು ನೆರೆಹೊರೆಯವರ ಡುಬ್ಬವನ್ನು ಮೆತ್ತಗೆ ಮಾಡಹತ್ತಿದರು. ''ಅಯ್ಯೋ ಸತ್ತೆ, ಏ ಬ್ರಾಹ್ಮಣಾ ಬಾರೋ, ಬಿಡಿಸೊ'' ಎಂದು ಶೆಟ್ಟರು ಒದರಲಿಕ್ಕೆ ಹತ್ತಿ

ದರು. ತಿರಕಂಭಟ್ಟ ಸಾವಕಾಶ ಬರಲಿಕ್ಕೆ ಹತ್ತಿದ. 'ನಮ್ಮನ್ನು ಉಳಿಸು' ಎಂದು ಎಲ್ಲರೂ ಹೇಳಿಕೊಳ್ಳಲಿಕ್ಕೆ ಹತ್ತಿದರು. ''ಶೆಟ್ಟರೇ, ಮೊದಲು ನನ್ನ ಗಡಿಗೆ ನನಗೆ ತಿರುಗಿ ಕೊಡಿರಿ. ಅಂದರೆ ಮಾತ್ರ ನಾನು ಈ ರಾಕ್ಷಸರನ್ನು ಇಲ್ಲದಂತೆ ಮಾಡುವೆ'' ಅಂದರು ಭಟ್ಟರು.

ಶೆಟ್ಟರು ಮೆತ್ತಗಾದರು. ಭಟ್ಟರ ಗಡಿಗೆ ತಿರುಗಿ ಕೊಟ್ಟರು. ಬ್ರಾಹ್ಮಣ ಮನಸಿನಲ್ಲಿ 'ಶಿವ ಶಿವ' ಅಂದನು. ಕೂಡಲೆ ಎಲ್ಲ ರಾಕ್ಷಸರು ಅದೃಶ್ಯರಾದರು.

ಎರಡೂ ಗಡಿಗೆ ಹಿಡಕೊಂಡು ತಿರಕಂಭಟ್ಟರು ಒಳ್ಳೇ ಭರದಿಂದ ಮನೆಗೆ ಬಂದರು. ಮನೆ ಮುಟ್ಟಲು ಭಳ್ಳೀ ಆತುರರಾಗಿದ್ದರು. ಕೈಯೊಳಗೆ ಎರಡು ಗಡಿಗಿ ಹಿಡಿದುಕೊಂಡು ಬಂದ ತನ್ನ ಯಜಮಾನನ ಅವತಾರ ನೋಡಿ ಸರಸ್ವತಿಬಾಯಿ ನಗಲಾರಂಭಿಸಿದಳು. ''ಹಾಂ ಹಾಂ, ನಗಬೇಡ. ಲಗು ಚೀಲಗಳನ್ನು ತಗೊಂಡು ಬಾ. ಚೂರಮರಿ ಪುಠಾಣಿಯಿಂದ ತುಂಬಿ ಬಿಡುತ್ತೇನೆ'' ಎಂದು ತಿರಕಂಭಟ್ಟನು ಅಂದನು. ''ಬೀಳು, ಬೀಳು" ಎಂದೊಡನೆ ಗಡಿಗೆಯೊಳಗಿಂದ ಚೂರಮರಿ ಪುಠಾಣಿಯ ಪ್ರವಾಹವೇ ಹೊರಬಿದ್ದಿತು. ಮಕ್ಕಳಿಗೆಲ್ಲ ಆನಂದವಾಯಿತು. ಅವುಗಳ ರುಚಿ ಅಮೃತದಂತೆ ಇತ್ತು. ಸರಸ್ವತಿಬಾಯಿ ನಾಲ್ಕು ಕಾಳು ಬಾಯಲ್ಲಿ ಹಾಕಿ ಅಂದಳು ''ಇಷ್ಟು ರುಚಿ ನಾನು ಎಂದೂ ಕಂಡಿದ್ದಿಲ್ಲ.''

ತಿರಕಂಭಟ್ಟರು ಒಂದು ಚೂರಮರಿ ಪುಠಾಣಿ ಅಂಗಡಿ ಹಾಕಿದರು. ಅವರ ಅಂಗಡಿಯಲ್ಲಿ ಜನ ಮುಕ್ಕುರುತ್ತಿದ್ದರು. ಅವರು ಸಾಹುಕಾರರಾದರು. ಭೂಮಿಗಳನ್ನು ಜಮೀನುಗಳನ್ನು ಖರೀದಿ ಮಾಡಿದರು. ಮಹಲಿನ ಮನೆ ಕಟ್ಟಿಸಿದರು. ಅವನಿಗೆ ಕೊರತೆಯೇ ಇದ್ದಿಲ್ಲ.

ಒಂದು ದಿನ ಭಟ್ಟರು ಒಂದು ಸಮೀಪದಲ್ಲಿದ್ದ ಹಳ್ಳಿಗೆ ಹೋಗಿದ್ದರು ಅವತ್ತಿನ ದಿನ ಗಡಿಗೆ ಯಾರು ಆಗಳಾಡಿಸಬೇಕು? ನಾನು ನೀನು ಎಂದು ಮಕ್ಕಳು ಬಡದಾಡಹತ್ತಿದರು. ಬಡಿದಾಟದಲ್ಲಿ ಗಡಿಗೆ ಒಡೆದು ಹೋಯಿತು. ಹುಡುಗರು ಅಳಲಾರಂಭಿಸಿದರು. ತಾಯಿ ಅವರನ್ನು ಹೊಡೆದಳು. 'ಸೊಕ್ಕಿಗೆ ಬಂದಿದ್ದೀರಿ ನೀವೆಲ್ಲ. ಇನ್ನೇನು ತಿನ್ನುವಿರಿ'

ಎಂದು ಅಂದಳು. ಭಟ್ಟರು ತಿರುಗಿ ಬಂದರು. ಅವರಿಗೆ ನಡೆದ ಸಂಗತಿ ತಿಳಿಯಿತು. ಸರಸ್ವತಿಬಾಯಿ ಅಂದಳು "ಮತ್ತೊಮ್ಮೆ ಆ ಗಿಡದ ಬುಡಕ್ಕೆ ಹೋಗಿ ಅಳುತ್ತ ಕೂಡಿರಿ. ಇನ್ನೊಂದು ಗಡಿಗೆ ಸಿಕ್ಕರೆ ನೆಟ್ಟಗೆ ಇಲ್ಲದಿದ್ದರೆ ಗಳಿಸಿದ ಆಸ್ತಿ ಮಾರಿ ಉಪಜೀವನ ಮಾಡೋಣ."

ಹೆಂಡತಿಯ ಮಾತು ಕೇಳಿ ಭಟ್ಟರು ಮತ್ತೆ ಆ ಗಿಡದ ಬುಡಕ್ಕೆ ಬಂದು ಕುಳಿತರು. ಅವರು ಅಳಲಿಕ್ಕೆ ಆರಂಭಿಸಿದರು. ಪಾರ್ವತಿ ಅಳುವ ಸ್ವರ ಕೇಳಿ ಶಂಕರನಿಗೆ ಅಂದಳು "ದೇವಾ, ಯಾರೋ ಅಳುತ್ತಾರೆ. ಇನ್ನೊಂದು ಗಡಿಗೆ ಉಳಿದಿದೆ, ಅದನ್ನು ಈ ಪ್ರಾಣಿಗೆ ಕೊಡುವಾ" ಹೀಗಂದು ಶಂಕರ ಪಾರ್ವತಿ ಆ ಗಿಡದ ಹತ್ತರ ಬಂದರು. "ಏನು ಭಟ್ಟರೆ, ಮತ್ತೆ ಆಗಮನ ತಮ್ಮದು" ಶಂಕರ ಅಂದನು. "ಇಲ್ಲ, ನನ್ನ ಮಕ್ಕಳು ತಮ್ಮ ಬಡಿದಾಟದಲ್ಲಿ ಮೊದಲು ನೀವು ಕೊಟ್ಟ ಗಡಿಗೆ ಒಡೆದರು. ನನ್ನ ನಶೀಬವೇ ಇಂತಹದೆಂದು ಕಾಣುತ್ತದೆ" ಅಂದನು ಭಟ್ಟನು.

"ಇದು ಇನ್ನು ಉಳಿದ ಒಂದೇ ಒಂದು ಗಡಿಗೆ. ಇದನ್ನು ತಗೋ. ಇನ್ನು ಮತ್ತೆ ಬಂದು ನೀನು ಎಷ್ಟು ಅತ್ತರೂ ಏನೂ ಸಿಕ್ಕಲಾರದು" ಎಂದು ಶಂಕರನು ಹೇಳಿದನು. "ಈ ಗಡಿಗೆಯೊಳಗಿಂದ ಹೊರಬೀಳುವದಾವರೂ ಏನು?" ಭಟ್ಟನು ಕೇಳಿದನು. "ನಿನಗೆ ಬೇಕಾದ ಪಕ್ವಾನ್ನ ಹೊರಬೀಳುತ್ತದೆ" ಎಂದು ಹೇಳಿದ ಶಂಕರ. ಭಟ್ಟರು ಅವರನ್ನು ನಮಸ್ಕರಿಸಿ ಆನಂದದಿಂದ ಮನೆಗೆ ಬಂದರು. ಹೆಂಡತಿ ಹಾದಿ ಕಾಯುತ್ತಾ ಇದ್ದಳು. ಹೊಸ ಗಡಿಗೆ ನೋಡಿ 'ಏನು ಹೊರಬೀಳುತ್ತದೆ ಇದರಲ್ಲೀದ?' ಅಂದಳು. "ಒಂದುಪಾತೇಲಿ ತಕ್ಕೊಂಡು ಬಾ ಮೊದಲು" ಅಂದರು ಭಟ್ಟರು. ಪಾತೇಲಿ ತಂದಳು. "ಶ್ರೀಖಂಡ" ಎಂದಂದು ಭಟ್ಟರು ಗಡಿಗೆ ಅಗಳಾಡಿಸಿದರು. ಪಾತೇಲಿ ತುಂಬ ಶ್ರೀಖಂಡ ಹೊರಬಿದ್ದಿತು. ಭಟ್ಟರು ಸ್ವಲ್ಪೆ ದಿನದಲ್ಲಿ ಮಿಠಾಯಿ ಅಂಗಡಿ ಹಾಕಿದರು. ಹಬ್ಬ ಹುಣ್ಣಿವೆಗೆ ಅವರ ಅಂಗಡಿಯಲ್ಲಿ ಜನ ಜಾತ್ರೆಯಾಗುವದು. ಶ್ರೀಮಂತರೆಲ್ಲರೂ ತಮಗೆ ಬೇಕಾದ ಪಕ್ವಾನ್ನಗಳನ್ನು ಇವರಲ್ಲಿಂದ ಒಯ್ಯುತ್ತಿದ್ದರು. ಇಷ್ಟು ಸೊಗಸಾದ ಪಕ್ವಾನ್ನ ಎಲ್ಲಿಯೂ ಸಿಕ್ಕುತ್ತಿದ್ದಿಲ್ಲ.

ಇದೇ ಊರಿನ ಧನಮಲ್ಲ ಎಂಬ ಶ್ರೀಮಂತ ಮನುಷ್ಯನಿದ್ದನು. ಅವನು ಏನಾದರೂ ಮಾಡಿ ಭಟ್ಟರ ನಗೆಗೆ ಅವಮಾನಪಡಿಸಬೇಕೆಂಬ ಹಂಚಿಕೆ ಹಾಕಿದ. ಒಂದು ದಿವಸ ಅವನ ಅಳಿಯ ಬಂದಿದ್ದ. ಅಳಿಯನಿಗೆ ಭೋಜನಾನಿ ಮಾಡಬೇಕೆಂದು ಅವನು ಆಲೋಚಿಸಿದ. ಧನಮಲ್ಲ ಭಟ್ಟರ ಕಡೆಗೆ, ಹೋಗಿ "ನನ್ನ ಅಳಿಯನಿಗೆ ಭೋಜನಾನಿ ಮಾಡಬೇಕೆಂದು ಮಾಡಿದ್ದೇನೆ. ನೀವು ನನಗೆ ಎಲ್ಲ ತರದ ಪಕ್ವಾನ್ನ ತಾಜಾ ಪೂರೈಸಬೇಕು" ಅಂದನು. ತಿರಸಂಭಟ್ಟರು ಅಂದರು. "ನನಗೆ ನೀವು ಒಂದು ಸ್ವತಂತ್ರ ಕೋಣೆ ಬಿಟ್ಟುಕೊಟ್ಟರೆ ನಾನು ಬರುವೆ. ಅಲ್ಲಿ ಯಾರೂ ಬರಬಾರದು. ನಾನು ಪಕ್ವಾನ್ನ ತುಂಬಿ ಪಾತ್ರೇಲಿ, ಪರಾತ ಹೊರಗೆ ಕೊಡುವೆ." ಧನಮಲ್ಲ ಒಪ್ಪೇನು ಅಂದನು.

ಭೋಜನಾನಿ ದಿವಸ ಬಂದಿತು. ಊರೊಳಗಿನ ಪ್ರಮುಖರೆಲ್ಲರನ್ನು ಧನಮಲ್ಲನು ಕರೆದಿದ್ದನು. ಊಟದ ತಯಾರಿ ಆಯಿತು. ಬಾಳೆಯಲಿ, ರಂಗೋಲಿ, ಮಣಿ ಎಲ್ಲ ಸಿದ್ಧ ಆಯಿತು. ಅಳಿಯನಿಗೆ ಬೆಳ್ಳಿಯ ತಾಟು ಇಟ್ಟದ್ದಾಯಿತು. ಅಷ್ಟರಲ್ಲಿ ತಿರಸಂಭಟ್ಟರು ಒಂದು ವಂಚೆಯಲ್ಲಿ ಗಡಿಗೆ ಕಟ್ಟಿಕೊಂಡು ಬಂದರು. ಅವರಿಗೆ ಸ್ವತಂತ್ರವಾಗಿ ಇಟ್ಟ ಖೋಲಿಗೆ ಹೋದರು. ಐದು ನಿಮಿಷದಲ್ಲಿ ಎಲ್ಲ ಪಕ್ವಾನ್ನಗಳು ತಯಾರಾದವು. ಅವನ್ನೆಲ್ಲ ಧನಮಲ್ಲ ಹೊರಗೆ ಇಸಗೊಂಡನು. ಎಲ್ಲರಿಗೂ ಸಾಕಾಗು ವಷ್ಟು ಪಕ್ವಾನ್ನಗಳು ತಯಾರಾದದ್ದು ನೋಡಿ ಧನಮಲ್ಲನು ಆ ಖೋಲಿಯ ಬಾಗಿಲಿನ ಹೊರಗಿಂದ ಚಿಲಕ ಹಾಕಿದನು. ಭಟ್ಟರು ಒಳಗಿಂದ ಬೇಕಾದಷ್ಟು ಒದರಿದರೂ ಕೂಡ ಬಾಗಿಲ ತೆಗೆಯಲಿಲ್ಲ.

ಧನಮಲ್ಲ ಅಂದನು "ಭಟ್ಟರೇ, ನೀವು ಆ ಗಡಿಗೆ ಕೊಡಲು ಒಪ್ಪಿದರೆ ನಿಮಗೆ ಹೊರಗೆ ಬಿಡುವೆ. ಇಲ್ಲದಿದ್ದರೆ ನೀವು ಇಲ್ಲೇ ಕೊಳೆತು ಸಾಯಬೇಕು." ಕೊನೆಗೊಮ್ಮೆ ಭಟ್ಟರು ಗಡಿಗೆ ಕೊಡಲು ಒಪ್ಪಿದರು. ಧನಮಲ್ಲ ಗಡಿಗೆ ತಕ್ಕೊಂಡು ಭಟ್ಟರನ್ನು ಹೊರಗೆ ಬಿಟ್ಟನು. ಇತ್ತ ಊಟ ಸಾಗಿತ್ತು. ಧನಮಲ್ಲ ಗಡಿಗೆಯೊಳಗಿಂದ ಹೊಸ ಹೊಸ ಪಕ್ವಾನ್ನಗಳನ್ನು ಹೊರಗೆ ತೆಗೆಯುತ್ತ ಬಡಿಸಹತ್ತಿದನು. ಜನರೆಲ್ಲರೂ ಸಂತೋಷ ಪಡೆದರು.

ಇಷ್ಟರಲ್ಲಿ ಭಟ್ಟರು ರಾಕ್ಷಸ ಗಡಿಗೆಯನ್ನು ತಕ್ಕೊಂಡು ಧನಮಲ್ಲನ ಮನೆಗೆ ಬಂದರು. ಅದನ್ನು ಇಷ್ಟು ದಿವಸ ಭಟ್ಟರು ಕಾಯ್ದು ಮಾಳಿಗೆಯ ಮೇಲೆ ಇಟ್ಟಿದ್ದರು. "ಈಗ ಒಂದು ಗಡಿಗೆ ನೀವು ತಗೊಂಡಿದ್ದಾಯ್ತು ಇದು ಇನ್ನೊಂದು ಗಡಿಗೆ ಇದೆ. ಇದರಲ್ಲಿಂತಂತೂ ಬಹಳ ಸುಂದರ ಪದಾರ್ಥಗಳು ಹೊರಬೀಳುತ್ತವೆ. ಇವನ್ನೂ ತಕ್ಕೊಳ್ಳಿರಿ. ನನಗೆ ಇನ್ನು ಏನೂ ಬೇಡ" ಅಂದು ಭಟ್ಟರು ಆ ಗಡಿಗೆಯನ್ನು ಧನಮಲ್ಲನಿಗೆ ಕೊಡಲು ಹೋದರು.

ಧನಮಲ್ಲ ''ತರ್ರಿ ಭಟ್ಟರೆ ಅದನ್ನು ಇಲ್ಲಿ'' ಅಂದು ಮತ್ತೆ ಪಂಕ್ತಿಯಲ್ಲಿ ಬಂದು "ಈಗ ನೀವು ತಿಂದ ಪದಾರ್ಥಗಳಿಗಿಂತ ಸುಂದರ ಪದಾರ್ಥ ಸಿಕ್ಕುವವು ನಿಮಗೆ. ಯಾರೂ ಸಂಕೋಚಗೊಳ್ಳಬೇಡಿರಿ'' ಅಂದನು.

ಹೊಸ ಗಡಿಗೆ ಅಗಳಾಡಿಸಿದ ಮಾತ್ರಕ್ಕೆ ಅದರೊಳಗಿಂದ ದೊಣ್ಣೆ ಹಿಡಿದ ರಾಕ್ಷಸರು ಹೊರಬಿದ್ದರು. ಅವರು ಊಟಕ್ಕೆ ಕೂತವರೆಲ್ಲರನ್ನು ಹೊಡೆಯಲಾರಂಭಿಸಿದರು; ಮೈ ಹಣ್ಣು ಮಾಡಿದರು. ಎಲ್ಲರೂ ''ನಾಸತ್ತೆ, ನಾ ಸತ್ತೆ" ಎಂದು ಅನ್ನಲಾರಂಭಿಸಿದರು. ಅತ್ತಿತ್ತ ಓಡಾಡಲಿಕ್ಕೆ ಹತ್ತಿದರು.

ಧನಮಲ್ಲ "ಆ ಬ್ರಾಹ್ಮಣನನ್ನು ಕರೆಯಿರಿ" ಎಂದು ಓಡಾಡಲಿಕ್ಕೆ ಹತ್ತಿದ. ಯಾರೋ ಹೋಗಿ ಭಟ್ಟರನ್ನು ಕರೆದರು. ''ಮೊದಲು ನನ್ನ ಗಡಿಗೆ ಕೊಡು, ಆ ಮೇಲೆ ಈ ರಾಕ್ಷಸರನ್ನು ಓಡಿಸುತ್ತೇನೆ'' ಅಂದರು ಭಟ್ಟರು. ಧನಮಲ್ಲ ಗಡಿಗೆ ತಂದು ಕೊಟ್ಟ. ಭಟ್ಟರು ''ಶಿವ-ಶಿವ" ಅಂದರು. ಕೂಡಲೇ ರಾಕ್ಷಸರು ಅದೃಶ್ಯರಾದರು.

ತಿರಕಂಭಟ್ಟರು ಎರಡೂ ಗಡಿಗೆ ತಕ್ಕೊಂಡು ಮನೆಗೆ ಬಂದರು. ಮುಂದೆ ಮಾತ್ರ ಅವರಿಗೆ ಯಾರೂ ಪೀಡಿಸಲಿಲ್ಲ. ಅವರು ಮಡದಿ ಮಕ್ಕಳೊಡನೆ ಸುಖದಿಂದ ಬಾಳಿದರು.

ತೀರಿತು ನಮ್ಮ ಕಥೆ ! ಹೋಗಲಿ ನಿಮ್ಮ ವ್ಯಥೆ.

---

# ನ್ಯಾಯ ತೀರಿಸುವ ಗೋಪಾಲ

## ೧.

ಒಂದು ಊರಲ್ಲಿ ಒಬ್ಬ ಬ್ರಾಹ್ಮಣನಿದ್ದನು. ಅವನಿಗೆ ಹೆಂಡತಿ ಇದ್ದಳು. ಐದು ಮಕ್ಕಳಿದ್ದವು. ದೊಡ್ಡ ಪ್ರಪಂಚ. ಮನೆಯಲ್ಲಿ ದುಡ್ಡಿದ್ದಿಲ್ಲ. ಮನೆ ಮಾಡಿದ ಮೇಲೆ ಏನು ಬೇಡ? ಹೊಟ್ಟೆಗೆಬೇಕು ಬಟ್ಟೆ ಬೇಕು, ಔಷಧ ಬೇಕು. ಆದರೆ ರಾಮುಭಟ್ಟರಲ್ಲಿ ಇವೆಲ್ಲಕ್ಕೂ ಕೊರತೆ. ಪಾಪ ಅವನ ಹೆಂಡತಿ ಸೀತಾಬಾಯಿ ನೆರೆಹೊರೆಯವರಲ್ಲಿ ದುಡಿದು ನಾಲ್ಕು ದುಡ್ಡು ತರುವಳು. ಅವರಿಂದ ಇಂಥ ದೊಡ್ಡ ಪ್ರಪಂಚಕ್ಕೆ ಅದು ಸಾಲುವದಾದರೂ ಹೇಗೆ?

ಒಂದು ದಿನ ಸೀತಾಬಾಯಿ ರೊಚ್ಚಿಗೆದ್ದಳು. ರಾಮುಭಟ್ಟರು ಬಂಕದಲ್ಲಿ ಕೂತಿದ್ದರು. ಚೀರುತ್ತ ಹೊರಗೆ ಬಂದು "ಬೆಣ್ಣಿ ಮುದ್ದಿ ಹಾಗೆ ಇಲ್ಲೇ ಕೂತಿರಿ. ನಿಮಗೆ ಸ್ವಲ್ಪಾದರೂ ನಾಚಿಕೆ ಅದೆಯೆ? ಚಿಂತೂನ ಮುಂಜಿವಿ ಆಗಬೇಕು. ಯಮುನಿ ಲಗ್ನ ಆಗಬೇಕು. ಆಕೆಗೆ ವರಾ ನೋಡಬೇಕು. ಆದರೆ ನಿಮಗೆ ಅದರ ಅರಿವಾದರೂ ಅದೆಯೆ? ಗಂಡಸರಾಗೀರಿ, ಏನಾದರೂ ಸ್ವಲ್ಪ ಪೌರುಷ, ಪರಾಕ್ರಮ, ಸಾಹಸ ತೋರಿಸೀರ್ಯಾ ಎಂದಾರ? ಭೂಮಿಗೆ ಭಾರ ಆಗಿಬಿಟ್ಟಿದ್ದೀರಿ'' ಸೀತಾಬಾಯಿ ರಾಮುಭಟ್ಟನಿಗೆ ಅಂದಳು.

ಅವಳ ಮಾತು ರಾಮುಭಟ್ಟನ ಮನಸಿಗೆ ಹತ್ತಿತು. ಎಲ್ಲಿಯಾದರೂ ದೂರ ಹೋಗಬೇಕು ಎಂದು ಮನಸಿನಲ್ಲಿ ಮಾಡಿಕೊಂಡನು. ಅವನು ಹೆಂಡತಿಗೆ ಅಂದನು "ಇವತ್ತಿನ ತನಕ ನಾನೂ ಪುಷ್ಕಳ ಸಹನ ಮಾಡಿದೆ. ಮುಂದಿ ಆಡದ ಮಾತೂ ನೀನು ಆಡಿಬಿಟ್ಟೆ ಇವತ್ತು. ನಾನು ಮನೆ ಬಿಟ್ಟು ಹೋಗುತ್ತೇನೆ. ನಾಲ್ಕು ಐದು ಸಾವಿರ ರೂಪಾಯಿ ಗಳಿಸಿಕೊಂಡು ಮನೆಗೆ ಬರುವೆ."

ಬ್ರಾಹ್ಮಣ ನಿಜವಾಗಿ ಹೋಗೇಬಿಟ್ಟ. ನೆರೆಹೊರೆಯ ಹೆಣ್ಣು ಮಕ್ಕಳು ಸೀತಾಬಾಯಿಗೆ "ಇನ್ನೇನು ಕಡಿಮೆ ನಿಮಗೆ, ಚೀಲ ತುಂಬ ದುಡ್ಡು ಬರು ವದು. ಬಂಗಾರ ಆಭರಣದಿಂದ ನಿಮ್ಮನ್ನು ಮುಚ್ಚಿಬಿಡುವರು'' ಎಂದು ಅನ್ನುತ್ತಿದ್ದರು. ಸೀತಾಬಾಯಿ ಅವರಿಗೆ ಅಂದಳು "ಎಲ್ಲಿ ದುಡ್ಡರಿ. ಅವ ರಲ್ಲಿ ಸಾಹಸ ಉದ್ಯೋಗವೇ ಇಲ್ಲ. ಎರಡು ದಿವಸದಾಗ ಬರಿಗೈಲೆ ತಿರುಗಿ ಬರತಾರ. ನೋಡಿರಿ ಬೇಕಾರ."

ರಾಮುಭಟ್ಟರ ಹಿತ್ತಲದಲ್ಲಿ ಒಂದು ದೊಡ್ಡ ಮರ ಇತ್ತು. ಅದು ಬಹಳ ಹಳೆಯದಿತ್ತು. ಅದರ ವಿಸ್ತಾರವೂ ದೊಡ್ಡದಿತ್ತು. ಆ ಗಿಡದ ಮೇಲೆ ಒಂದು ದೆವ್ವ ಇತ್ತು. ಇಂಥ ಮರಗಳ ಮೇಲೆ ದೆವ್ವಗಳ ಪ್ರೀತಿ ವಿಶೇಷ. ರಾಮುಭಟ್ಟನ ರೂಪ ತಾಳಬೇಕೆಂದು ಆ ದೆವ್ವಕ್ಕೆ ಅನಿಸಿತು. ಆ ಪ್ರಕಾರ ರಾಮುಭಟ್ಟರಂತೆ ಹುಬೆಹೂಬ ವೇಷ ತಾಳಿ ಮುಂಜಾನೆ ಆ ದೆವ್ವ ಮನೆಯ ಬಾಗಿಲಿಗೆ ಬಂದಿತು. ಅಂಗಳದಲ್ಲಿ ಸಾರಿಸುತ್ತಿರುವ ಸೀತಾಬಾಯಿ ರಾಮು ಭಟ್ಟರನ್ನು ನೋಡಿ ಸುರುವು ಮಾಡಿದಳು, "ಬಂದಿರಿ ಹೌದಲ್ಲೊ ತಿರುಗಿ. ಗೊತ್ತೇ ನನಗೆ. ಬಂಕವಾಗ ಉದ್ಯೋಗ ಇಲ್ಲದ ಕೂಡೋ ಜೀವ ನಿಮ್ಮದು. ಹಿಂಗ್ಯಾಕ ಕಂಬದಾಂಗ ಅಲ್ಲಿ ನಿಂತಿರಿ. ಬರ್ರಿ ಒಳಗೆ'' ಅಂದಳು ಸೀತಾಬಾಯಿ. ಆ ದೆವ್ವ ಅಂದಿತು, "ಏನೇ, ನಾನು ಹಾಗೇ ಬಂದಿಲ್ಲ; ನಾನು ಮಂತ್ರ ಕಲಿತು ಬಂದೇನಿ. ಅದು ಋದ್ಧಿ ಸಿದ್ಧಿ ಮಂತ್ರ. ನಿನಗೆ ಏನು ಬೇಕಾದದ್ದು ಬೇಡು ನಾ ಕೊಡತೇನಿ."

"ಹಾಗಾದರೆ ಕೊಡಿ ಐದು ನೂರು ರೂಪಾಯಿಗಳನ್ನು" ಅಂದಳು ಸೀತಾಬಾಯಿ.

"ಕಣ್ಣು ಮುಚ್ಚು" ಎಂದಿತು ದೆವ್ವ. ಸೀತಾಬಾಯಿ ಕಣ್ಣು ಮುಚ್ಚಿ ದಳು. 'ತೆರೆ ಕಣ್ಣು' ಅಂದಿತು ದೆವ್ವ. ಅವಳು ಕಣ್ಣು ತೆರೆಯುವದ ರೊಳಗಾಗಿ ಅಲ್ಲಿ ಐದು ನೂರು ರೂಪಾಯಿ ತುಂಬಿದ ಚೀಲ ಬಿದ್ದಿತ್ತು. ಅವಳು ಒಮ್ಮೆಲೆ ಎತ್ತಿ, ಒಳಗೆ ಕೇಲಿಂದೊಳಗೆ ಇಟ್ಟಳು. ಅವಳಿಗೆ ಭಾಳ ಆನಂದವಾಯಿತು. ಮುಂದೆ ಅವಳು ಗಂಡನೊಡನೆ ಒಳ್ಳೇ ಪ್ರೀತಿಯಿಂದ ಬಾಳಿದಳು. ದುಡ್ಡಿಗೆ ಒಲಿಯದವರೇ ಇಲ್ಲ ಜಗತ್ತಿನಲ್ಲಿ.

ಸೀತಾಬಾಯಿಗೆ ಯಾವ ವಸ್ತುವಿನ ಕೊರತೆ ಇದ್ದಿಲ್ಲ. ಮಕ್ಕಳಿಗೆ ಅರವಿ ಅಂಚಡಿ ದಾಗೀನೆಗಳನ್ನು ಮಾಡಿಸಿಕೊಟ್ಟಳು. ಮನೆ ತುಂಬ ಆಳು. ಒಳ್ಳೇ ಸುಖದಿಂದ ಇದ್ದಳು. "ಯಾವ ದೇವರು ಪ್ರಸನ್ನನಾದನೋ ರಾಮ ಭಟ್ಟರಿಗೆ" ಎಂದು ಎಲ್ಲ ಜನ ಅನ್ನುತ್ತಿತ್ತು. ರಾಮಭಟ್ಟರ ಮನೆಯಲ್ಲಿ ಜನ ಜಾತ್ರೆ ನಡವೇ ಇತ್ತು. ಊಟ, ಉಡಿಗೆ, ಇಸ್ಪೇಟಿನ ಆಟ, ಸಂಗೀತ ಕಚೇರಿ ನಡದೇ ಇರಬೇಕು.

"ರಾಮಭಟ್ಟರೇ, ಇನ್ನು ನೀವು ಗೃಹಸ್ಥರಾದಿರಿ, ಇನ್ನು ಮುಂದೆ ನಾವೆಲ್ಲರೂ ರಾಮರಾವ ಅನ್ನಬೇಕು" ಅಂದರು. ಕೃಷ್ಣಭಟ್ಟರು "ಅದೇಕೆ? ದುಡ್ಡು ಎರಡು ದಿನದ್ದು. ನನಗೇನು ಭಟ್ಟ ಅಂದರೆ ಅವಮಾನ ಎನಿಸುವ ದಿಲ್ಲ. ರಾಮಭಟ್ಟರು ಅನಿಸಿಕೊಳ್ಳುವದರಲ್ಲಿ ನನಗೆ ಒಳ್ಳೇ ಅಭಿಮಾನ" ಎಂದಿತು ಆ ದೆವ್ವ.

ಹೀಗೆ ದಿನಗಳಾದವು, ತಿಂಗಳು ಕಳೆದವು, ವರ್ಷ ಮುಗಿದವು. ಆ ದೆವ್ವ ರಾಮಭಟ್ಟ ಎಂದು ಮೆರೆಯುತ್ತಿತ್ತು. ಯಮುನೆಯ ಲಗ್ನವಾಯಿತು. ಚಿಂತೂನ ಮುಂಜಿವಿ ಆಯಿತು. ಮತ್ತೆ ಸೀತಾಬಾಯಿ ಎರಡು ಮಕ್ಕಳನ್ನು ಹಡೆದಳು. ಮನೆ ಒಳ್ಳೆ ತುಂಬಿತ್ತು; ಗೋಕುಳದಂತೆ ಶೋಭಿಸುತ್ತಿತ್ತು.

ಆದರೆ ನಿಜವಾದ ರಾಮಭಟ್ಟ ಎಲ್ಲಿ? ಅವನು ಎಲ್ಲಿ ಹೋಗಿದ್ದ, ಅವನ ಸಮಾಚಾರವಾದರೂ ಏನು? ಅವನು ಹತ್ತು ಹನ್ನೆರಡು ವರುಷ ಉಪವಾಸ ವನವಾಸ ತೆಗೆದ. ಬಹಳ ಉದ್ಯೋಗ ಕೈಕೊಂಡನು. ಮತ್ತು ಕೈಯಲ್ಲಿ ಗಂಟು ಮಾಡಿಕೊಂಡನು. ಇನ್ನು ಮನೆಗೆ ಹೋಗಬೇಕು, ಹೆಂಡತಿಗೆ-ಮಕ್ಕಳಿಗೆ ಸುಖದಿಂದ ಇಡಬೇಕು, ಎಂದು ಲೆಕ್ಕ ಹಾಕಿ ಬೇರೆ ಬೇರೆ ವಸ್ತುವಡವೆಗಳನ್ನು ಕೊಂಡು ಮನೆಯ ಕಡೆಗೆ ಹೊರಟನು. ತನ್ನ ಪ್ರಪಂಚದ ಕೊನೆಯ ಭಾಗದಲ್ಲಿಯಾದರೂ ಸುಖ ಪಡೆಯುವ ಎಂದು ವಿಚಾರ ಮಾಡಿದ.

ಎಷ್ಟೋ ವರ್ಷಗಳಾದ ಮೇಲೆ ನಿಜವಾದ ರಾಮಭಟ್ಟ ಮನೆಗೆ ಬಂದನು. ಅಲ್ಲಿ ಬಂಡು ಕಟ್ಟೆಯ ಮೇಲೆ ಕೂತ. ಅಲ್ಲಿ ಆ ದೆವ್ವ ಕೂತಿತ್ತು.

'ಯಾರು ನೀವು?' ಎಂದು ಕೇಳಿತು. 'ನೀನಾರು ಎಂದು' ರಾಮ ಭಟ್ಟ ಕೇಳಿದರು. 'ಇದು ನನ್ನ ಮನೆ, ನಾನು ನನ್ನ ಮನೆಗೆ ಬಂದಿದ್ದೇನೆ.'

"ರಾಮುಭಟ್ಟರೆ, ಇದು ನನ್ನ ಮನೆ. ಈಗ ಐವತ್ತು ವರ್ಷ ನಾನು ಇಲ್ಲಿ ಇದ್ದೇನೆ. ಹುಡುಗರು ಹುಟ್ಟಿದರು. ಪ್ರಪಂಚ ಸಾಗಿದೆ. ನಿಮಗೇನೋ ತಲೆ ಕೆಟ್ಟಂತೆ ಕಾಣುತ್ತದೆ" ಅಂದಿತು ಆ ದೆವ್ವ.

ಮೊದಲೇ ದಣಿದು ಬಂದಿದ್ದರು ರಾಮುಭಟ್ಟರು. ಒಳ್ಳೇ ಆಶೆಯಿಂದ ಬಂದಿದ್ದ. ಅವನು ರೊಚ್ಚಿಗೆದ್ದು ಒದರಾಡಲು ಆರಂಭಿಸಿದ. ಸೀತಾಬಾಯಿ ಬಂದಳು. ಆಳುಹೋಳು ಬಂದರು. ಹುಡುಗರು ಬಂದರು. ನೆರೆಹೊರೆ ಯುವರು ನೆರೆದರು. 'ಏನೇ ನೀನೂ ನನ್ನನ್ನು ಗುರುತಿಸಲಿಲ್ಲವೇ? ಯಮುನಿ ಚಿಂತ್ಯಾ ನಿಮ್ಮಪ್ಪನ ಗುರುತು ಇಲ್ಲ ನಿಮಗೆ?' ಎಂದು ರಾಮುಭಟ್ಟರು ಅಂದರು. "ಕೃಷ್ಣಭಟ್ಟರೆ, ನೀವೂ ನನ್ನನ್ನು ಗುರುತಿಸಲಿಲ್ಲವೇ?"

"ರಾಮುಭಟ್ಟರು ಮನೆ ಬಿಟ್ಟದ್ದೆ ನಾವು ನೋಡಿಲ್ಲ. ಏನೋ ನಿಮಗೆ ಹುಚ್ಚು ಹಿಡಿದಂತೆ ತೋರುತ್ತದೆ. ಸಿಕ್ಕವರಿಗೆಲ್ಲ ನನ್ನ ಹೆಂಡತಿ ಮಕ್ಕಳು ಅನ್ನುವದಕ್ಕೆ" ಕೃಷ್ಣಭಟ್ಟ ಅಂದನು.

ಎಲ್ಲರೂ ಕೂಡಿ ನಿಜವಾದ ರಾಮುಭಟ್ಟನನ್ನು ಹೊರಗೆ ಹಾಕಿದರು. ಯಾರಿಗಾಗಿ ಅವನು ದೇಶಾಂತರ ಮಾಡಿದನೋ, ಆ ಹೆಂಡರು ಮಕ್ಕಳು ಅವನಿಗೆ ತಮ್ಮವನು ಅನಲೊಲ್ಲರು. ಅವರಿಗಾಗಿ ಅವನು ಎಷ್ಟು ವಸ್ತು ಗಳನ್ನು ತಂದಿದ್ದ. ಆದರೆ ಅದರದೇನು ಈಗ? ಅಳುತ್ತ ರಾಮುಭಟ್ಟ ರಾಜನ ಕಡೆಗೆ ಹೋಗಿ ಫಿರ್ಯಾದಿ ಕೊಟ್ಟನು.

ನ್ಯಾಯ ಮಂದಿರದಲ್ಲಿ ಜನ ಕಿಕ್ಕಿರಿದು ಕೂಡಿತ್ತು. ರಾಮುಭಟ್ಟ ರಿಬ್ಬರು ರಾಜನ ಎದುರು ನಿಂತಿದ್ದರು. "ಈ ರಾಮುಭಟ್ಟ ಕಳ್ಳನಿದ್ದಾನೆ" ಎಂದು ಒಬ್ಬನು ಅಂದನು. 'ಇವನು ಸುಳ್ಳ'ನೆಂದು ಮತ್ತೊಬ್ಬನು ಅಂದನು. 'ರಾಮುಭಟ್ಟರು ಮನೆ ಬಿಟ್ಟು ಹೋಗೇಯಿಲ್ಲ. ಈಗ ಐವತ್ತು ವರುಷ ಇಲ್ಲೇ ಇದ್ದಾರೆ' ಎಂದು ನೆರೆಹೊರೆಯುವರೆಲ್ಲರೂ ಹೇಳಿದರು.

ರಾಜನಿಗೆ ಏನು ಮಾಡಬೇಕು ಎಂಬದು ತೋಚಲಿಲ್ಲ. ಅವನು ನಿಜವಾದ ರಾಮಭಟ್ಟನಿಗೆ ಅಂದನು, "ನೆರೆಹೊರೆಯವರೆಲ್ಲ ರಾಮಭಟ್ಟ ಊರು ಬಿಟ್ಟೇಯಿಲ್ಲ ಎಂದು ಹೇಳುತ್ತಾರೆ. ನೀನಂತೂ ನಿನ್ನೆ ಬಂದಿರುತ್ತಿ. ಇವರೆಲ್ಲ ಹೇಳುವವು ಸುಳ್ಳು, ನಿನ್ನದು ಮಾತ್ರ ನಿಜ ಎಂದು ತಿಳಿದು ಕೊಳ್ಳುವದು ಸರಿಯಲ್ಲ. ನಿನಗೆ ದೆವ್ವನ ಬಾಧೆ ಇದ್ದಂತೆ ತೋರುತ್ತದೆ ಹೋಗು."

ಹಣಿಗೆ ಕೈಹಚ್ಚಿಕೊಂಡು, ಅಳುತ್ತ ರಾಮಭಟ್ಟರು ಹೊರಬಿದ್ದರು. ಹಾಗೇ ಊರ ಹತ್ತರಿದ್ದ ಅಡವಿಗೆ ಹೋದರು. ವಾರ್ಧಕ್ಯದಲ್ಲಿ ತನ್ನನ್ನು ನೋಡುವವರಾರೂ ಇಲ್ಲವಲ್ಲ ಎಂದು ನೆನಿಸಿ ಬಿಕ್ಕಿ ಬಿಕ್ಕಿ ಅಳುತ್ತಿದ್ದ. ಕೆಲವು ಗೋಪಾಲರು (ದನ ಕಾಯುವವರು) ಅಲ್ಲಿಯೇ ತಮ್ಮ ಆಕಳು ಗಳನ್ನು ಮೇಯಿಸುತ್ತಿದ್ದರು. ಕೆಲವರು 'ಅರಸ ಮತ್ತು ಪ್ರಜೆ' ಎಂಬ ಆಟ ಆಡುತ್ತಿದ್ದರು. ಅವರಲ್ಲಿ ಒಬ್ಬನು ಅರಸನಾಗಿದ್ದ. ಇನ್ನೊಂದಿಬ್ಬರು ಸಿಪಾಯಿಯಾಗಿದ್ದರು. ಅರಸನು ಸಿಪಾಯರಿಗೆ ಅಂದನು, "ನಾನು ಈ ಅಡ ವಿಯ ಒಡೆಯ. ನನ್ನ ರಾಜ್ಯದಲ್ಲಿ ಯಾರೂ ದುಃಖದಿಂದ ಬಳಲಬಾರದು. ಹೋಗಿರಿ. ಅತ್ತಿತ್ತ ಅಡ್ಡಾಡಿ ಬರ್ರಿ. ಎಲ್ಲಿಯೂ ಅನ್ಯಾಯವಾಗದಂತೆ ನೋಡಿಕೊಳ್ಳಿರಿ. ಯಾರಿಗಾದರೂ ದುಃಖವಾದರೆ, ಅನ್ಯಾಯವಾದರೆ ನಾನು ಅದನ್ನು ನಿವಾರಿಸುವೆನು. ಹೋಗಿರಿ."

ಸಿಪಾಯಿಗಳು ಅತ್ತಿತ್ತ ಅಡ್ಡಾಡುವಾಗ ಗಿಡದ ಬುಡದಲ್ಲಿ ಅಳುತ್ತ ಕೂತ ಬ್ರಾಹ್ಮಣನನ್ನು ನೋಡಿದರು. ಅವನನ್ನು ನೋಡಿದ ಕೂಡಲೇ ಅವಸರದಿಂದ ಅವನಿದ್ದಲ್ಲಿ ಹೋದರು. "ಅಜ್ಜ, ನೀನು ಅಳುವದೇತಕ್ಕೆ? ನಿನಗಾದ ಅನ್ಯಾಯ ಯಾವದು? ನಮ್ಮ ರಾಜನು ನಿನಗಾದ ಅನ್ಯಾಯ ವನ್ನು ಹೋಗಲಾಡಿಸುವನು. ನಿನ್ನ ದುಃಖವನ್ನು ದೂರ ಓಡಿಸುವನು ನಡೆ ಅಲ್ಲಿಗೆ" ಅಂದರು ಆ ದನ ಕಾಯುವ ಹುಡುಗರು. ರಾಮಭಟ್ಟರು ಏಳ ಲಿಲ್ಲ. "ಸುಮ್ಮನೆ ನಮ್ಮ ರಾಜನ ಆಜ್ಞೆಯಂತೆ ಏಳುತ್ತೀರೋ ಇಲ್ಲವೊ?" ಎಂದು ಸಿಪಾಯರು ಕೇಳಿದರು. "ಯಾಕೆ ಮುದುಕನಿಗೆ ಕಾಡತೀರಪ್ಪಾ? ನಾನು ದುರ್ದೈವಿ. ಈ ಜಗತ್ತಿನಲ್ಲಿ ನನ್ನವರು ಯಾರೂ ಇಲ್ಲ. ಜಗತ್ತಿನಲ್ಲಿ

ಎಲ್ಲಿ ನೋಡಿದಲ್ಲಿ ಅನ್ಯಾಯ, ಸುಳ್ಳು ಇವುಗಳ ಸುಳುವೆ ಸುಳುವು" ಅಂದನು ರಾಮುಭಟ್ಟ. "ಇಲ್ಲ, ನಮ್ಮ ರಾಜ್ಯದಲ್ಲಿ ಯಾರೂ ಅಳತಕ್ಕದ್ದಲ್ಲ. ನಡೆ ನಮ್ಮ ರಾಜನಲ್ಲಿ, ನಿನಗೆ ನ್ಯಾಯವು ದೊರೆಯುವದು ಖಂಡಿತ" ಎಂದು ಸಿಪಾಯರು ಅಂದರು. ಮುದುಕ ಉಪಾಯವಿಲ್ಲದೆ ಎದ್ದು ಅವರನ್ನು ಹಿಂಬಾಲಿಸಿದನು. ರಾಜನಾದ ಗೋಪಾಲ ಬಾಲನು, "ಅಜ್ಜ, ಏನಿದೆ ನಿಮ್ಮ ದುಃಖ. ನನಗೆಲ್ಲ ಹೇಳಿರಿ'' ಅಂದನು. ಮುದುಕ ಇದ್ದದ್ದನ್ನೆಲ್ಲ ತೋಡಿಕೊಂಡ. ಗೋಪಾಲ ಬಾಲರು ನಗಲಿಕ್ಕೆ ಹತ್ತಿದರು. ''ಹಾಂ, ಸುಮ್ಮನಾಗಿರಿ. ಇಲ್ಲಿ ಯಾರೂ ನಗತಕ್ಕದ್ದಲ್ಲ. ಮತ್ತೆ ನಕ್ಕದ್ದು ನೋಡಿದರೆ ನಿಮಗೆ ಶಿಕ್ಷೆ ವಿಧಿಸುವೆ. ಏನು, ನಮ್ಮೂರಅರಸನೂ ನಿನಗೆ ನ್ಯಾಯ ಕೊಡಲಿಲ್ಲವೆ? ನಾನಿದ್ದರೆ ನಿನ್ನ ಹೆಂಡರು, ಮಕ್ಕಳು, ಮನೆ ಎಲ್ಲವನ್ನೂ ಕೊಡಿಸಿಬಿಡುತ್ತಿದ್ದೆ. ಹೋಗು, ಈಗ ಹೋಗು ಅರಸನ ಕಡೆ. ಮತ್ತು ಅವನಿಗೆ ಹೇಳು ದನಕಾಯುವ ಹುಡುಗರ ಅರಸನಾದ ರಾಮಾ ಗೋಪಾರಿ ಈತನು ನನಗೆ ನಿಜವಾದ ನ್ಯಾಯ ಕೊಡಲು ಸಿದ್ಧನಿದ್ದಾನೆ. ಹೀಗೆ ಹೋಗಿ ಹೇಳುತ್ತೀಯಲ್ಲ?" ಅಂದನು ಆಟದಲ್ಲಿಯ ಅರಸ. "ನಾನು ಹೋಗಿ ಹೇಳುವದಾದರೂ ಹೇಗೆ? ಅರಸನ ಆಳು ನನ್ನನ್ನು ಒಳಗೆ ಬಿಡಲಿಕ್ಕಿಲ್ಲ. ನನಗೆ ತುರಂಗಕ್ಕೆ ಅಟ್ಟಬಹುದು. ಮುದಿಹುಚ್ಚು ಹಿಡಿದಿದೆ ಎಂದು ನನಗೆ ಹೊರಗೆ ಅಟ್ಟುವರು" ಅಂದನು ರಾಮುಭಟ್ಟ.

''ಏ ಮುದುಕ' ಅದೇನು ಇಲ್ಲಿ ನಡೆಯುವಂತಿಲ್ಲ. ನೀನು ನಮ್ಮ ಅರಸನ ಆಜ್ಞೆಯನ್ನು ಪಾಲಿಸಬೇಕು. ಇಲ್ಲದಿದ್ದರೆ ದುಬ್ಬ ಮೆತ್ತಗಾದೀತು" ಸಿಪಾಯರು ಅಂದರು. "ಅಂತು ಪ್ರಯತ್ನ ಮಾಡಿ ನೋಡುತ್ತೇನೆ" ಅಂದರು ಭಟ್ಟರು.

*

"ಯಾರಿಗೆ ಗೊತ್ತು. ಒಮ್ಮೊಮ್ಮೆ ಹುಡುಗರು ಸಹ ಕಠಿಣವಾದ ಸಮಸ್ಯೆಗಳನ್ನು ಒಳ್ಳೇ ಸುಲಭ ರೀತಿಯಿಂದ ಬಿಡಿಸುತ್ತಾರೆ. ಏನೋ; ನೋಡುವ ಇದೊಂದು ಸಂಧಿ. ಹುಡುಗರ ಬುದ್ಧಿ, ರಾಜನ ಬುದ್ಧಿಗಿಂತ ಚೆನ್ನಾಗಿ ನಡೆಯಬಹುದು." ಹೀಗೆ ವಿಚಾರ ಮಾಡುತ್ತ ಮಾಡುತ್ತ ಅರಮನೆಯ ಹತ್ತಿರ ಬಂದರು ರಾಮುಭಟ್ಟರು. ಅಲ್ಲಿ ಅವನನ್ನು ಯಾರೂ

ದಾದು ಮಾಡವಲ್ಲರು. ಕೊನೆಗೊಮ್ಮೆ ಒಬ್ಬನಿಗೆ ಕನಿಕರ ಬಂದು ಅವನು ರಾಮುಭಟ್ಟರನ್ನು ರಾಜನಿದ್ದಲ್ಲಿ ತಂದು ನಿಲ್ಲಿಸಿದ. "ಮತ್ತೇಕೆ ಭಟ್ಟರೆ ನಿಮ್ಮ ಆಗಮನ. ನನಗಂತೂ ನಿಮ್ಮ ಫಿರ್ಯಾದಿ ವಿಚಾರ ಮಾಡಲು ಬರುವದಿಲ್ಲ. ನೀವಿಬ್ಬರೂ ಅಗದಿ ಏಕರೂಪ ಕಾಣುತ್ತೀರಿ. ಇಂಥ ಪ್ರಸಂಗ ದಲ್ಲಿ ನ್ಯಾಯವನ್ನಾದರೂ ಬಗೆಹರಿಸುವದು ಹೇಗೆ?" ಎಂದು ಅರಸನು ಅಂದನು.

"ಇಲ್ಲ ಮಹಾರಾಜರೆ, ನಾನು ಅಡವಿಯಲ್ಲಿ ಅಳುತ್ತ ಕೂತಿದ್ದೆ. ಅಲ್ಲಿ ದನಕಾಯುವ ಹುಡುಗರು ರಾಜ-ಪ್ರಜೆರ ಆಟ ಆಡುತ್ತಿದ್ದರು. ಅವರ ರಾಜನಾದ ರಾಮಾ ಗೋವಾರಿ ಇವನು ತಾನು ನನ್ನ ನ್ಯಾಯ ಒಳ್ಳೇ ಸುಲಭ ರೀತಿಯಿಂದ ತೀರಿಸುತ್ತೇನೆಂದು ಹೇಳಿದ್ದಾನೆ. ಮಹಾರಾಜ, ನಿಮ್ಮ ಅವಮಾನ ಮಾಡಬೇಕೆಂಬ ಉದ್ದೇಶ ನನ್ನದಲ್ಲ. ಒಮ್ಮೊಮ್ಮೆ ಹುಡುಗಬುದ್ಧಿ ವಿಲಕ್ಷಣವಿದ್ದದ್ದು ತೋರಿಬರುತ್ತದೆ. ಏನೋ ನನ್ನ ನಶೀಬ ಪರೀಕ್ಷೆ. ತಾವು ಪ್ರಯೋಗ ಮಾಡಿ ನೋಡಬೇಕು. ನಾನು ಸುಖಿಯಾಗ ಬಹುದು. ಅಂಗಲಾಚಿ ಬೇಡಿಕೊಳ್ಳುತ್ತೇನೆ" ಅಂದನು ರಾಮುಭಟ್ಟನು.

ರಾಜ ಪ್ರಯೋಗ ಮಾಡಲು ನಿರ್ಧರಿಸಿದ. ಮರುದಿನ ನ್ಯಾಯಾಲಯ ದಲ್ಲಿ ಜನ ಕಿಕ್ಕಿರಿದು ಕೂಡಿಬಿಟ್ಟಿತ್ತು. ಒಬ್ಬ ದನಕಾಯುವ ಹುಡುಗ ನ್ಯಾಯಾಸನದ ಮೇಲೆ ಕುಳಿತು ನ್ಯಾಯ ಕೊಡುವನು. ಎಲ್ಲರಿಗೂ ಒಳ್ಳೇ ಆಶ್ಚರ್ಯದ ಸಂಗತಿ. ರಾಮಾ ಗೋವಾರಿ ಬಂದ. ಅವನೊಡನೆ ಅವನ ಜೊತೆಗಾರ ಹುಡುಗರೂ ಬಂದರು. ರಾಮಾ ಬಂದೊಡನೆ ಎಲ್ಲ ಅಧಿಕಾರಿ ಎದ್ದು ನಿಂತರು.

ರಾಜನು ಅಂದನು "ಇಂದು ರಾಮಾ ಗೋವಾರಿ ನ್ಯಾಯಾಸನದ ಮೇಲೆ ಕೂಡ್ರುವನು. ಅವನ ಗೆಳೆಯರು ಅವನ ಸಿಪಾಯಿಗಳಾಗಿ ಅವನ ಸುತ್ತಲೂ ನಿಲ್ಲುವರು."

ರಾಮಾ ಗೋವಾರಿ ಬಂದು ನ್ಯಾಯಾಸನವನ್ನು ಅಲಂಕರಿಸಿದನು. ರಾಜ ಸಿಂಹಾಸನದ ಮೇಲೆ ಕುಳಿತ. ಪ್ರಧಾನ ಮತ್ತು ಇತರ ಅಧಿಕಾರಿ ಗಳು ತಮ್ಮ ಸ್ಥಳಗಳ ಮೇಲೆ ಕುಳಿತರು. ವ್ಯಾಜ್ಯ ಸುರುವಾಯಿತು.

"ಎಲ್ಲಿ ಇದ್ದಾರೆ ಇಬ್ಬರೂ ರಾಮಭಟ್ಟರು. ನಿಲ್ಲಿಸಿರಿ ಅವರನ್ನು ನನ್ನೆದುರು" ಎಂದು ಆಜ್ಞಾಪಿಸಿದ ರಾಮಾ ಗೋವಾರಿ.

ಅವರಿಬ್ಬರನ್ನು ಅಲ್ಲಿ ನಿಲ್ಲಿಸಲಾಯಿತು. ಸೋಗು ಹಾಕಿದ ರಾಮಭಟ್ಟ ನಗಲಾರಂಭಿಸಿದ. ನಿಜವಾದ ರಾಮಭಟ್ಟ ಅಸಂತೃಪ್ತ. ಜನರು ಒಳ್ಳೇ ಕುತೂಹಲದಿಂದ ನೋಡುತ್ತಿದ್ದರು.

"ಎರಡು ಬಾಟಲಿ ತಕ್ಕೊಂಡು ಬರ್ರಿ" ಆಜ್ಞಾಪಿಸಿದ ರಾಮಾ ಗೋವಾರಿ.

ಎರಡು ಬಾಟಲಿಗಳನ್ನು ತಂದು ಅಲ್ಲಿ ಇಡಲಾಯಿತು. ರಾಮಾ ಗೋವಾರಿ ಇಬ್ಬರೂ ರಾಮಭಟ್ಟರನ್ನು ಉದ್ದೇಶಿಸಿ ಅಂದನು, "ನಾನೂ ರಾಮಭಟ್ಟ, ನಾನೂ ರಾಮಭಟ್ಟ ಎಂದು ನೀವಿಬ್ಬರೂ ಬಡಿದಾಡುತ್ತೀರಿ. ಒಳ್ಳೇದು. ಅದು ಇರಲಿ. ಈಗ ಇಲ್ಲಿ ಎರಡು ಬಾಟಲಿಗಳು ಇದ್ದದ್ದು ನೀವು ನೋಡುತ್ತೀರಿ. ನಿಜವಾಗಿ ರಾಮಭಟ್ಟನು ಇರುವವನು ಈ ಬಾಟಲಿಯಲ್ಲಿ ಸೇರುವನು. ಹೊರಗೆ ಉಳಿಯುವವನೇ ಸೋಗು ಹಾಕಿದವನು. ಲಗು ಮುಗಿಸಿರಿ. ಸೇರಿರಿ ಬಾಟಲಿಯಲ್ಲಿ ನಿಜವಾಗಿ ರಾಮಭಟ್ಟ ಇರುವವನು''

ಜನರ ಕುತೂಹಲ ಬೆಳೆಯಹತ್ತಿತು. ಏನು ಚಮತ್ಕಾರವಾಗುತ್ತದೋ ನೋಡುತ್ತಾ ಇದ್ದರು. ನಿಜವಾದ ರಾಮಭಟ್ಟರು ಅಂದರು, "ಬಾಟಲಿಯಲ್ಲಿ ಸೇರುವದಾದರೂ ಹೇಗೆ?'' ಆದರೆ ಸೋಗು ಹಾಕಿದವನು ಅಂದ ''ಹೇಗೆ ನಾನು ತೋರಿಸುತ್ತೇನೆ" ಹೀಗೆ ಅಂದು, ದೇಹ ಆಕುಂಚಿಸಿಕೊಂಡು ಬಾಟಲಿ ಸೇರಿಬಿಟ್ಟ. ರಾಮಾ ಗೋವಾರಿ ಕೆಳಗೆ ಇಳಿದು ಬಂದು ಬಾಟಲಿ ಬಾಯಿ ಬೂಚಿನಿಂದ ಮುಚ್ಚಿಬಿಟ್ಟ. ಜನರಿಗೆಲ್ಲ ಆಶ್ಚರ್ಯವಾಯಿತು.

ರಾಮಾ ಗೋವಾರಿ ಎದ್ದು ಹೇಳಿದ, "ನ್ಯಾಯ ದೊರೆಯಿತು. ಬಾಟಲಿಯಲ್ಲಿ ಸೇರಿಕೊಂಡ ರಾಮಭಟ್ಟ ಎಂದರೆ ದೆವ್ವ. ಸಣ್ಣದಾಗುವದು ದೊಡ್ಡದಾಗುವದು ಮಾತ್ರ ದೆವ್ವಗಳಿಗೆ ಸಾಧ್ಯ. ಮಾನವರಿಗಲ್ಲ. ಈ ದೆವ್ವ ಇಷ್ಟು ವರ್ಷ ರಾಮಭಟ್ಟ ಎಂದು ಮೆರೆಯುತ್ತಿತ್ತು. ಖರೇ ರಾಮಭಟ್ಟರು ಇಲ್ಲಿ ನಿಂತಿದ್ದಾರೆ.''

ಜನರೆಲ್ಲರು ಚಪ್ಪಾಳೆ ಹೊಡೆದರು. ಅರಸ, ಅವನ ಅಧಿಕಾರಿಗಳೆಲ್ಲ ಬೆರಗಾದರು. ಅರಸ ಎದ್ದು ರಾಮಾ ಗೋವಾರಿಗೆ ಅಂದ, ''ಶಾಬಾಸ, ನಾನು ನಿನ್ನ ಮೇಲೆ ಪ್ರಸನ್ನನಾಗಿದ್ದೇನೆ. ನಿನಗೆ ಏನುಬೇಕು ಅದನ್ನು ಬೇಡಿಕೊಳ್ಳು.''

ರಾಮಾ ಗೋವಾರಿ ಹೇಳಿದನು, "ನಾನು ದನಕಾಯುವವನು. ನನಗೆ ಜಹಗೀರು ಬೇಡ, ಇನಾಮು ಬೇಡ. ದನಗಳಿಗೆ ಮೇಯಲಿಕ್ಕೆ ಪುಕ್ಕಟೆಯಾಗಿ ಹುಲ್ಲು ಗದ್ದೆಗಳನ್ನು ದಯಪಾಲಿಸಿದರೆ ಸಾಕು. ಎಲ್ಲರ ಆಕಳು ಗಳು ಸುಖದಿಂದ ಮೇಯಲಿ. ಹೆಚ್ಚಾಗಿ ಹಾಲು ಹಿಂಡಲಿ. ಜನ ಹಾಲು, ತುಪ್ಪ ಉಂಡು ಸುಖದಿಂದ ಬಾಳಲಿ! ದನಕಾಯುವವರದು ಇದೇ ಬೇಡಿಕೆ ಮಹಾರಾಜರೆ!

ರಾಮಾ ಮತ್ತು ಅವನ ಜೊತೆಗಾರರು ಅಡವಿಗೆ ಹೋದರು. ಜನರು ತಮ್ಮ ತಮ್ಮ ಮನೆಗೆ ಹೋದರು. ರಾಮುಭಟ್ಟರು ತಮ್ಮ ಮನೆ ಸೇರಿದರು. ಅವರ ಹೆಂಡತಿಯ ಕಣ್ಣು ನೀರಿನಿಂದ ತುಂಬಿದವು. ಹುಡುಗರು ಭಿಟ್ಟಿ ಯಾದರು. ಎಲ್ಲರೂ ಸುಖಿಯಾದರು.

ಅವರಂತೆ ನೀವೂ ಸುಖದಿಂದ ಬಾಳಿರಿ!



# ಫಕೀರ (ಗೋಸಾವಿ.)

೪

ಒಬ್ಬ ಅರಸನಿದ್ದ. ಅವನಿಗೆ ಎಲ್ಲ ತರದ ಸುಖವಿತ್ತು. ಕೊರತೆ ಎಂಬುದು ಗೊತ್ತೇ ಇಲ್ಲ ಅವನಿಗೆ. ಒಂದೇ ಒಂದು ದುಃಖ ಮಾತ್ರ ಅವನಿಗಿತ್ತು. ಅವನಿಗೆ ಮಕ್ಕಳಿದ್ದಿಲ್ಲ. ಅರಸು ಅರಸಿ ಇಬ್ಬರೂ ಖಿನ್ನರಾಗಿದ್ದರು. ಅರಸಿ ವ್ರತಗಳನ್ನು ಮಾಡಿದಳು, ಉಪವಾಸ ಕೈಕೊಂಡಳು. ಏನು ಮಾಡಿದರೂ ಮಕ್ಕಳು ಆಗಲಿಲ್ಲ. ಅರಮನೆಯಲ್ಲಿ ಸಂಪತ್ತು ತುಂಬಿತ್ತು. ಆನೆ ಕುದುರೆ, ದಾಸಿಯರು ಯಾವುದಕ್ಕೂ ಕೊರತೆ ಇದ್ದಿಲ್ಲ. ಆದರೆ ಅತ್ತಿತ್ತ ಓಡಾಡುವ ಮಗುವೊಂದು ಇದ್ದಿಲ್ಲ. ಎಲ್ಲವೂ ಇದ್ದರೂ ಏನೂ ಇಲ್ಲದಂತೆ ಅನಿಸಿತು ಅರಸಿಗೆ.

ಒಂದು ದಿನ ಒಬ್ಬ ಗೋಸಾವಿ ಭಿಕ್ಷೆಗೆ ಬಂದ. ಮೈಗೆಲ್ಲ ಭಸ್ಮ. ಕೊರಳಲ್ಲಿ ರುದ್ರಾಕ್ಷಿ ಮಾಲೆ, ತಲೆತುಂಬ ಜಟೆ. ಅವನ ಅವತಾರ ನೋಡಿ ಓಣಿಯಲ್ಲಿದ್ದ ಹುಡುಗರು ಅಂಜಿ ಓಡಿಹೋದರು. ಅವ ಅರಮನೆ ಅಂಗಳದಲ್ಲಿ ಭಿಕ್ಷೆ ಬೇಡಲು ಬಂದ. ಅರಸಿ ಖಿನ್ನಮುಖಿಯಾಗಿದ್ದಳು. ಗೋಸಾವಿ ಅರಸಿಗೆ ಅಂದ, "ಏನಮ್ಮ ನಿಮಗೇತರ ದುಃಖ?" ಅರಸಿ ಅಂದಳು, "ನನ್ನಲ್ಲಿ ಎಲ್ಲ ರತ್ನಗಳು ಅವೆ, ಆದರೆ ಪುತ್ರರತ್ನ ಒಂದಿಲ್ಲ. ಅದರದೆ ವ್ಯಥೆ ನನಗೆ." ಗೋಸಾವಿ ಅಂದ "ನಾನು ನಿನಗೆ ಇಬ್ಬರು ಮಕ್ಕಳನ್ನು ದಯಪಾಲಿಸುತ್ತೇನೆ. ಆದರೆ ಒಂದು ಕರಾರು ಪೂರೈಸಬೇಕು ನೀವು. ನೀವು ಇಬ್ಬರು ಮಕ್ಕಳನ್ನು ಹೆತ್ತರೆ ನನಗೆ ಒಬ್ಬ ಮಗನನ್ನು ಕೊಡಬೇಕು. ನಾನು ಹನ್ನೆರಡು ವರುಷದ ವರೆಗೆ ಬೇಕಾದಾಗ ಬರುವವನು. ಹನ್ನೆರಡು ವರುಷ ಮೀರಿದರೆ ಮಾತ್ರ ಎರಡೂ ಮಕ್ಕಳು ನಿಮ್ಮವು.

ಅರಸಿ ಮನಸಿನಲ್ಲಿ ಅಂದುಕೊಂಡಳು, ಒಬ್ಬಮಗನನ್ನು ಕೊಟ್ಟರೆ ಒಬ್ಬನಾದರೂ ಉಳಿಯುವನು" ಹೀಗೆ ವಿಚಾರ ಮಾಡಿ ಅವಳು

ಗೋಸಾವಿಯು ಕರಾರಕ್ಕೆ ಒಪ್ಪಿದಳು. ಮತ್ತು ಅವನಿಗೆ ಹೇಳಿದಳು, "ಒಳ್ಳೇದು ನಾನು ನಿಮಗೆ ಒಬ್ಬ ಮಗನನ್ನು ಕೊಡುವೆ. ನಿಮ್ಮ ದಯೆಯಿಂದ ಒಬ್ಬ ಮಗನನ್ನಾದರೂ ನಾನು ಪಡೆಯುವೆ. ಹನ್ನೆರಡು ವರುಷ ನಿಮ್ಮ ಹಾದಿ ಕಾಯುವೆ. ನನ್ನ ತೊಡೆಗಳು ಮಗುವಿನ ಸ್ಪರ್ಶದಿಂದ ಒಮ್ಮೆಯಾದರೂ ಧನ್ಯವಾಗಲಿ."

ಆ ಗೋಸಾವಿಯು ಅರಸಿಗೆ ಒಂದು ಬೇರು ಕೊಟ್ಟನು. "ಇದನ್ನು ತೆಯ್ದು ನೀವು ತಿನ್ನಿರಿ. ನಿಮಗೆ ಅವಳಿ ಜವಳಿ ಗಂಡಸು ಮಕ್ಕಳು ಹುಟ್ಟುವವು. ನಾನು ಹೋಗುತ್ತೇನೆ" ಎಂದಂದು ಗೋಸಾವಿಯು ತೆರಳಿದನು.

ಅರಸನಿಗೆಲ್ಲ ಈ ಸಂಗತಿ ಅರಸಿ ತಿಳಿಸಿದಳು. ಅವನಿಗೂ ಬಹಳ ಆನಂದವಾಯಿತು. ಅರಸಿ ಬೇರು ತೇಯ್ದು ತಿಂದಳು. ಅವಳಿಗೆ ಅವಳಿ ಜವಳಿ ಮಕ್ಕಳಾದರು. ಎಲ್ಲರಿಗೂ ಆನಂದವಾಯಿತು. ರಾಜ್ಯದಲ್ಲಿ ಅಲ್ಲಲ್ಲಿ ಉತ್ಸವಗಳಾದವು. ಸಕ್ಕರಿ ಹಂಚಲಾಯಿತು. ತುರಂಗದಲ್ಲಿದ್ದ ಕೈದಿಗಳನ್ನು ಬಿಟ್ಟರು. ಒಕ್ಕಲಿಗರಿಗೆ ಹಪ್ತೆ! ಸೂಟ ಬಿಡಲಾಯಿತು. ಪ್ರಜೆಗಳೆಲ್ಲ ರಾಜಪುತ್ರರನ್ನು ಆಶೀರ್ವದಿಸಿದರು.

ದಿನದಿನಕ್ಕೆ ಶುಕ್ಲಪಕ್ಷದ ಚಂದ್ರನಂತೆ ರಾಜಕುಮಾರರು ಬೆಳೆಯಹತ್ತಿದರು. ಅವರೀರ್ವರೂ ಒಳ್ಳೆ ಸುಂದರರಿದ್ದರು. ಕಣ್ಣು, ಕಿವಿ, ಮೂಗು ಎಲ್ಲವೂ ಪ್ರಮಾಣಬದ್ಧವಾಗಿದ್ದವು. ಕೂದಲು ಕರ್‍ರಗಿದ್ದವು. ಅಂಗಕಾಂತಿ ಬಿಳಿಯದಾಗಿತ್ತು. ಅರಸು ಅರಸಿಯರ ಆನಂದಕ್ಕೂ ಮಿತಿಯೇ ಇದ್ದಿಲ್ಲ. ಅರಸಿಗಂತೂ ಹುಡುಗರನ್ನು ಎಲ್ಲಿಡಲಿ, ಎಲ್ಲಿ ಬೇಡ ಅನಿಸುತ್ತಿತ್ತು. ಆದರೆ ಅವಳಿಗೆ ಮನಸಿನಲ್ಲಿ ದುಃಖ ಅನಿಸುತ್ತಿತ್ತು. ಎರಡೂ ಹುಡುಗರನ್ನು ಹತ್ತರ ಕೂಡ್ರಿಸಿಕೊಂಡಾಗ್ಗೆ ಅವಳ ಕಣ್ಣಿನಲ್ಲಿ ನೀರು ನಿಲ್ಲುತ್ತಿದ್ದವು.

ಒಬ್ಬ ಕುಮಾರನ ಮೇಲೆ ಅರಸನ ಪ್ರೀತಿ ವಿಶೇಷ. ಇನ್ನೊಬ್ಬನ ಮೇಲೆ ಅರಸಿಯ ಪ್ರೀತಿ. ಒಬ್ಬ ಅರಸನ ಜೊತೆ ಅಡ್ಡಾಡಬೇಕು, ಮಲಗಬೇಕು. ಇನ್ನೊಬ್ಬ ಅರಸಿಯ ಜೊತೆಗೆ ಇರುತ್ತಿದ್ದ. ಹೀಗೆಯೇ ಐದು ವರ್ಷ ಆದವು, ಹತ್ತು ವರ್ಷ ಕಳೆದವು. ಅರಸಿ ಮನಸ್ಸಿನಲ್ಲಿ ಅಂದಳು,

"ಆ ಗೋಸಾವಿ ಇನ್ನೂ ಬರಲಿಲ್ಲ. ಅವನು ಸತ್ತಿರಬೇಕು." ಹಿಗೆಂತೆ ಹನ್ನೆರಡು ವರುಷ ಮುಗಿಯುಲು ಬಂದವು. "ನಾಳೆ ಕೊನೆಯ ದಿವಸ. ನಾಳೆ ಒಂದ್ಲೆ ದಿವಸ ಪಾರಾದರೆ ಹನ್ನೆರಡು ವರುಷ ಮುಗಿಯುವವು. ಮತ್ತು ದೇವರ ಕೃಪೆಯಿಂದ ಕುಮಾರರೀರ್ವರೂ ಸುಖದಿಂದ ಬಾಳುವರು" ಎಂದು ಅರಸಿ ಹಾರೈಸಿದಳು.

ಕೊನೆಯ ದಿವಸ ಬಂದಿತು. ಅಂದು ಅರಸಿಯ ಮನಸು ಅಸ್ವಸ್ಥವಾಗಿತ್ತು. ಹೊರಗೆ ತಂಪಾದ ಗಾಳಿ ಬೀಸುತ್ತಿತ್ತು. ಮುಗಿಲಲ್ಲಿ ಮೋಡಗಳು ಇದ್ದವು. ಅರಸಿಗೆ ಅಳುವು ನಿಲ್ಲಲೊಲ್ಲದು. ಕುಮಾರರಿಬ್ಬರೂ ಅವಳ ಜೊತೆಯಲ್ಲಿಯೇ ಇದ್ದರು ಅಂದು. ಸಂಜೆಯಾಯಿತು. ಹಕ್ಕಿಗಳು ಗೂಡು ಸೇರಲಾರಂಭಿಸಿದವು. ಗೋವು ದನವ ಮನಿ ಸೇರಿದವು. ದೀಪ ಹಚ್ಚುವ ಸಮಯ. ಅರಸಿ ತುಳಸಿಕಟ್ಟೆಯ ಮೇಲೆ, ಇಬ್ಬರೂ ರಾಜಕುಮಾರನನ್ನು ಕೂಡ್ರಿಸಿಕೊಂಡು ಕೂತಿದ್ದಳು.

ಅಷ್ಟರಲ್ಲಿ ಅಂಗಳದಲ್ಲಿ ಆ ಗೋಸಾವಿಯು ಬಂದು ನಿಂತನು. ಕಾಲ ಪುರುಷನಂತೆ ಕಂಡ ಅವನು. ಅರಸಿಗೆ ಸಿಡಿಲು ಬಡೆದಂತಾಯಿತು. ಅವಳು ಏಳಲೂ ಇಲ್ಲ, ಮಾತನಾಡಲೂ ಇಲ್ಲ. ಗೋಸಾವಿ ಸಿಟ್ಟಿಗೆದ್ದು ಅಂದನು, "ಜಗತ್ತು ಕೃತಘ್ನ ಅದೆ. ತಕ್ಕೊಳ್ಳುವದು ಎಲ್ಲರಿಗೂ ಬೇಕು. ಕೊಡುವದು ಯಾರಿಗೂ ಬೇಡ. ಬೇಕಾದಾಗ ಜಗತ್ತು ಕಾಲು ಬೀಳುತ್ತದೆ. ಕೊಡುವ ಪ್ರಸಂಗ ಬಂದಾಗ ಎಲ್ಲರೂ ಮೋರೆ ತಪ್ಪಿಸುತ್ತಾರೆ. ಅರಸಿ, ನಿನಗೆ ನನ್ನ ಗುರುತು ಹತ್ತಿತೋ? ನಿನಗೆ ಮಕ್ಕಳನ್ನು ಕೊಟ್ಟವನು ನಾನೆ. ಅವರಿಬ್ಬರಲ್ಲಿ ಒಬ್ಬನನ್ನು ಕೊಡು ನನಗೆ."

ಅರಸ ಧಾವಿಸಿ ಬಂದನು. ಅರಸ-ಅರಸಿ ಅಳಲಾರಂಭಿಸಿದರು. ಒಬ್ಬನು ಅರಸನಿಗೆ ಬೇಕಾದವನು, ಇನ್ನೊಬ್ಬನು ಅರಸಿಗೆ ಬೇಕಾದವನು. ಯಾವ ಕುಮಾರನನ್ನು ಕೊಡುವದು ಎಂಬ ಸಮಸ್ಯೆ ಅವರಿಗೆ.

ಕೊನೆಗೆ ಅರಸ ತನಗೆ ಬೇಕಾದವನನ್ನೇ ಗೋಸಾವಿಗೆ ಕೊಟ್ಟನು. ಅರಸ ಅಂದ, "ಕುಮಾರಾ, ಸುಖದಿಂದಿರು."

ಆ ಕುಮಾರ ಹೋಗುವಾಗ್ಗೆ ತಾಯಿಗೆ ಹೇಳಿದ, "ತಾಯಿ, ಅಳ ಬೇಡ. ಅಪ್ಪಾ ಅಳಬೇಡ. ನನ್ನ ಮೇಲೆ ಏನಾದರೂ ಸಂಕಟ ಬಂದರೆ ಈ ಅಂಗಳದಲ್ಲಿದ್ದ ತುಲಸಿಗಿಡ ನಡಗುವದು. ಅದು ನಡುಗಿದ ಕೂಡಲೇ ನನ್ನ ಮೇಲೆ ಸಂಕಟ ಬಂದಿದೆ ಎಂದು ತಿಳಿದು ನನ್ನನ್ನು ಹುಡುಕುವದಕ್ಕಾಗಿ ನನ್ನ ತಮ್ಮನನ್ನು ಕಳಿಸಿರಿ" ಎಂದು ತಂದೆ ತಾಯಿಗೆ ನಮಸ್ಕಾರ ಮಾಡಿ, ತನ್ನ ತಮ್ಮನನ್ನು ಅಪ್ಪಿಕೊಂಡು ಆ ರಾಜಕುಮಾರ ಗೋಸಾವಿಯೊಡನೆ ಹೊರಟನು. ನೆರೆದವರೆಲ್ಲರ ಕಣ್ಣಲ್ಲಿ ನೀರು ತುಂಬಿದವು. ಗೋಸಾವಿಯನ್ನು ಹಿರಿಯ ರಾಜಕುಮಾರ ಹಿಂಬಾಲಿಸಿದನು. ನಡುನಡುವೆ ಅವನಿಗೆ ಮನೆಯ ನೆನಪು ಆಗುತ್ತಿತ್ತು. ಆಗ ಅವನು ಬಿಕ್ಕುತ್ತಿದ್ದ. ಅಲ್ಲಲ್ಲಿ ಎಡವುತ್ತಿದ್ದನು. ಎಡವಿದಾಗ ತಾಯಿ ನನ್ನನ್ನು ನೆನಸಿರಬೇಕು, ತಂದೆ ನೆನಸಿರಬೇಕು, ತಮ್ಮ ನೆನಸಿರಬೇಕು ಎಂದು ಮನಸಿನಲ್ಲಿ ಅಂದು ಮುಂದೆ ಸಾಗಿದನು.

ಹಾದಿಯಲ್ಲಿ ಮೊಲದ ಎರಡು ಮರಿಗಳಿದ್ದವು. ಅದರಲ್ಲಿಯ ಒಂದು ಮರಿ ತನ್ನ ತಾಯಿಗೆ ಅಂದಿತು, "ರಾಜಕುಮಾರನು ಹೊರಟಿದ್ದಾನೆ. ನಾನೂ ಅವನ ಜೊತೆಗೆ ಹೋಗಲಿಯಾ?'' ತಾಯಿ:- ''ಹೋಗು" ಅಂದಳು. ರಾಜಕುಮಾರ ಆ ಸುಕುಮಾರ ಮರಿಯನ್ನು ಎತ್ತಿಕೊಂಡು ಹಾಗೇ ಮುಂದೆ ಸಾಗಿದ. ಒಂದು ಗಿಡದ ಟೊಂಗಿಯ ಮೇಲೆ ಒಂದು ಗಿಳಿ ಕೂತಿತ್ತು. ಅದರ ಜೊತೆಗೆ ಅದರ ಎರಡು ಮರಿಗಳು ಕೂತಿದ್ದವು. ರಾಜಕುಮಾರನನ್ನು ನೋಡಿ ಗಿಳಿಮರಿ ತನ್ನ ತಾಯಿಗೆ ಅಂದಿತು, "ನಾನು ಈ ರಾಜಕುಮಾರನೊಡನೆ ಹೋಗುತ್ತೇನೆ." "ಹೋಗು'' ಎಂದು ಆ ತಾಯಿ ಹೇಳಿತು. ಆ ಗಿಳಿಮರಿಯನ್ನು ರಾಜಕುಮಾರ ತನ್ನ ಹೆಗಲ ಮೇಲೆ ಕೂಡಿಸಿಕೊಂಡನು. ಗೋಸಾವಿ ಮತ್ತು ರಾಜಕುಮಾರ ಹಾಗೇ ಮುಂದೆ ಸಾಗಿದರು. ಹಾದಿಯಲ್ಲಿ ಒಂದು ನಾಯಿ ಮತ್ತು ಅದರ ಎರಡು ಕುನ್ನಿಗಳು ಇದ್ದವು. ಒಂದು ಕುನ್ನಿ ತನ್ನ ತಾಯಿಗೆ ಅಂದಿತು, "ಅಗೋ ನೋಡು! ಇಬ್ಬರು ರಾಜಕುಮಾರರ ಪೈಕಿ ಒಬ್ಬ ಹೊರಟಾನೆ. ನಾನೂ ಅವನ ಜೊತೆಗೆ ಹೋಗಲಿಯಾ?'' "ಹೋಗು" ಎಂದು ನಾಯಿ ಹೇಳಿತು. ಮೊಲದ ಮರಿ, ಗಿಳಿಮರಿ, ನಾಯಿಕುನ್ನಿ ಇವನ್ನೆಲ್ಲ ಜೊತೆಗೆ ಕರ

ಕೊಂಡು ರಾಜಕುಮಾರ ಗೊಸಾವಿಯೊಡನೆ ನಿಬಿಡವಾದ ಅರಣ್ಯ ಸೇರಿದನು. ಅಲ್ಲಿ ಸೂರ್ಯನ ಕಿರಣಕ್ಕೆ ಸಹ ಪ್ರವೇಶವಿದ್ದಿಲ್ಲ.

ಸ್ವಲ್ಪಹೊತ್ತು ನಡೆದ ಬಳಿಕ ಗೋಸಾವಿಯು ನಿಂತನು. ಅಲ್ಲಿಯೇ ಒಂದು ಪರ್ಣಕುಟೀರ ಇತ್ತು. ಗೋಸಾವಿ ರಾಜಕುಮಾರನಿಗೆ ಅಂದ, "ತಮ್ಮಾ, ಇದೇ ನಿನ್ನ ಮನೆ, ನೀನು ಇಲ್ಲಿಯೇ ಇರುವನು. ಅಡವಿಯಲ್ಲಿ ತುಂಬ ಹಣ್ಣುಹಂಪಲಗಳಿವೆ. ಅಲ್ಲಲ್ಲಿ ನೀರಿನ ಝರಿಗಳಿವೆ. ಹಣ್ಣು ಹಂಪಲು ಯಾವಾಗಲೂ ಸಿಗುವವು. ನೀರು ಅಮೃತದಂತಿದೆ. ಅದನ್ನು ಕುಡಿ, ಹಣ್ಣು ತಿನ್ನು. ಉತ್ತಮವಾದ ಹೂಗಳಿವೆ. ಅವುಗಳ ಹಾರಗಳನ್ನು ಧರಿಸು. ಬೇರೆ ಬೇರೆ ಹಕ್ಕಿಗಳ, ನವಿಲುಗಳ ಪುಚ್ಛ ಗರಿಗಳು ಸಿಕ್ಕುವವು. ಅದರ ಮುಕುಟ ಮಾಡಿ ಹಾಕಿಕೋ. ನೀನು ಈ ಕಾಡಿನ ಅರಸ. ಆದರೆ ಒಂದು ಮಾತು ಮಾತ್ರ ನೆನಪಿನಲ್ಲಿಡು. ''ನೀನು ಉತ್ತರ ದಿಕ್ಕಿಗೆ ಮಾತ್ರ ಹೋಗಬೇಡ. ಅಲ್ಲಿ ಹೋದರೆ ನಿನಗೆ ಅಪಾಯವಿದೆ. ಬೇರೆ ಯಾವ ಕಡೆಗೆ ಹೋದರೂ ಅಡ್ಡಿಯಿಲ್ಲ. ನಾನು ಇನ್ನು ಹೋಗುತ್ತೇನೆ. ನಾನು ಇಂಥ ಕಾಲಕ್ಕೇ ಬರುತ್ತೇನೆಂದು ಹೇಳಲು ಬರುವಂತಿಲ್ಲ. ನೀನು ಸುಖದಿಂದ ಇರು." ಇಷ್ಟು ಹೇಳಿ ಗೋಸಾವಿಯು ಹೋದನು.

ರಾಜಕುಮಾರ ಹಣ್ಣು ತಿಂದ. ನೀರು ಕುಡಿದ. ಸ್ನಾನ ಮಾಡಿದ. ಹೂವಿನ ಹಾರ ಹಾಕಿದ. ಮೊಲ, ಗಿಳಿ, ನಾಯಿ ಇವುಗಳಿಗೆ ತಿನ್ನಲಿಕ್ಕೆ ಹಾಕಿದ. ಅತ್ತಿತ್ತ ಓಡಾಡಿದ. ಮತ್ತೆ ಮನೆಗೆ ಬಂದು ಮಲಗಿಕೊಂಡ. ಈ ರೀತಿ ಅವನ ದಿನದ ಕ್ರಮ ನಡೆದಿತ್ತು.

ಅವನು ಒಂದು ದಿನ ಒಂದು ಅಂದವಾದ ಚಿಗರೆಯ ಮರಿ ಕಂಡ. ಅದರ ಬೆನ್ನು ಹತ್ತಿದ. ಅದು ಉತ್ತರ ದಿಕ್ಕಿಗೆ ಹೊರಟಿತ್ತು. ಅತ್ತ ಹೋಗಬಾರದು ಎಂಬ ಮಾತು ಅವನು ಮರೆತ. ಅವನಿಗೆ ಭ್ರಮೆಯಾದಂತಾಯಿತು. ಚಿಗರಿಮರಿ ಬೆನ್ನು ಹತ್ತಿ ರಾಜಕುಮಾರ ಹೊರಟನು. ಚಿಗರಿಮರಿ ಎಲ್ಲಿಯೋ ಕಾಣದಂತಾಯಿತು. ಅತ್ತಿತ್ತ ನೋಡಿದ, ಚಿಗರಿಮರಿ ಇದ್ದಿಲ್ಲ. ಅವನಿಗೆ ಆಶ್ಚರ್ಯವೆನಿಸಿತು. ಆದರೆ ಅಷ್ಟರಲ್ಲಿ ಒಂದು ಗಿಡದ

ಅಡಿಯಲ್ಲಿ ಒಳ್ಳೇ ಚಲುವೆಯಾದ ಒರ್ವ ಸ್ತ್ರೀಯು ಕೂತಿದ್ದಳು. ರಾಜ ಕುಮಾರ ಅವಳಿದ್ದಲ್ಲಿ ಹೋಗಿ "ಚಿಗರಿಮರಿ ನೋಡಿದಿರಾ" ಎಂದು ಕೇಳಿದನು. "ನನಗೇನು ಗೊತ್ತು ನಿಮ್ಮ ಚಿಗರಿಮರಿ? ನಾನು ಇಲ್ಲಿ ಕೂತು ಬರುಹೋಗುವವರಿಗೆ ಪಗಡಿ ಆಡಲಿಕ್ಕೆ ಕರಿಯುತ್ತೇನೆ. ನೀವೂ ಬರ್ರಿ, ನನ್ನೊಡನೆ ದ್ಯೂತ ಆಡಿರಿ. ಈ ಕೆತ್ತ ನಿಮ್ಮ ಹಾದಿ ನೋಡುತ್ತದೆ" ಅಂದಳು ಆ ಸುಂದರ ಸ್ತ್ರೀ. ರಾಜಕುಮಾರ ಅಭಿಮಾನಿ ಇದ್ದನು. ಅವನು ಅವಳೊಡನೆ ಆಡಲಾರಂಭಿಸಿದ. ಮೊಲದ ಮರಿಯು ಜಿದ್ದು ಕಟ್ಟಿದ. ರಾಜ ಕುಮಾರನು ಅದನ್ನು ಸೋತನು. ಮತ್ತೆ ಆಡಿದ. ಗಿಳಿಮರಿ ಸೋತನು. ಮತ್ತೆ ಆಡಿ ನಾಯಿಕುನ್ನಿಯನ್ನು ಕಳಕೊಂಡನು. "ನನ್ನಲ್ಲಿದ್ದದ್ದನ್ನೆಲ್ಲ ನಾನು ಕಳಕೊಂಡೆ. ಇನ್ನು ಆಟ ಸಾಕು!' ಅಂದ ರಾಜಕುಮಾರ. ಆ ಸ್ತ್ರೀ ಅಂದಳು. "ನಿನ್ನನ್ನೇ ಆಟಕ್ಕೆ ಹಚ್ಚು. ಇನ್ನೂ ನೀನಿದ್ದೀಯಲ್ಲಾ."

ರಾಜಪುತ್ರ ತನ್ನನ್ನೇ ಪಣಕ್ಕೆ ಹಚ್ಚಿದ. ಆಡುತ್ತ ಆಡುತ್ತ ಅವನು ಸೋತ. ಆ ಸ್ತ್ರೀ ಅವನನ್ನು ಗೆದ್ದಳು, ಮತ್ತು ತನ್ನ ದಾಸನನ್ನಾಗಿ ಮಾಡಿದಳು. ಅವಳು ಓರ್ವ ದುಷ್ಟ ರಾಕ್ಷಸಿ, ಮೋಸಗಾರ್ತಿ, ಕಪಟಿ. ಅವಳು ಮಾಯೆಯಿಂದ ರಾಜಪುತ್ರನನ್ನು ಒಂದು ಹಂದಿಯ ಮರಿ ಮಾಡಿಬಿಟ್ಟಳು. ಮೊಲದಮರಿ, ಗಿಳಿಮರಿ, ನಾಯಿಕುನ್ನಿ ಮತ್ತು ಹಂದಿರೂಪಗೊಂಡ ರಾಜಕುಮಾರನನ್ನು ಜೊತೆಗೆ ಕರಕೊಂಡು ಆ ರಾಕ್ಷಸಿ ಹೊರಟಳು. ಮತ್ತು ತನ್ನ ಗುಹೆಗೆ ಬಂದಳು. "ಇನ್ನೇನು, ನಾಲ್ಕು ದಿವಸ ಉತ್ತಮವಾದ ಮೇಜವಾನಿ ಆಯಿತು. ಮೊದಲನೆ ದಿನ ಮೊಲ, ಎರಡನೆ ದಿನ ಗಿಳಿ, ಮೂರನೇ ದಿನ ನಾಯಿಕುನ್ನಿ, ನಾಲ್ಕನೆ ದಿನದ ಮಜೆಯಂತೂ ಬಣ್ಣಿಸುವಂತೇ ಇಲ್ಲ" ಅಂದುಕೊಂಡಳು ಆ ರಾಕ್ಷಸಿ.

ಇತ್ತ ಅರಮನೆಯ ಹಿತ್ತಲದಲ್ಲಿ ಚಮತ್ಕಾರವೇ ಆಯಿತು. ತುಳಸಿ ಗಿಡ ಗದಗದ ನಡುಗಲಿಕ್ಕೆ ಹತ್ತಿತು. ಅರಸಿಗೆ ದಾಸಿಯರು ಹೇಳಿದರು. ಅರಸ-ಅರಸಿ ಅಂಗಳದಲ್ಲಿ ಬಂದು ನೋಡಿದರು. ಚಿಕ್ಕ ರಾಜಕುಮಾರ ಧಾವಿಸಿ ಬಂದ. "ನನ್ನ ಅಣ್ಣನು ಏನೋ ದೊಡ್ಡ ಸಂಕಟದಲ್ಲಿ ಸಿಕ್ಕಿದ್ದಾನೆ. ನಾನು ಹೋಗುವೆ. ನಾನು ಅವನನ್ನು ಪಾರುಮಾಡಿಕೊಂಡು ಬರುತ್ತೇನೆ" ಹೀಗಂದು ತಾಯಿ ತಂದೆಗೆ ನಮಸ್ಕಾರ ಮಾಡಿ ಅವನು ಹೊರಟನು.

ಹಾದಿಯಲ್ಲಿ ಇನ್ನೊಂದು ಮಲಮರಿ, ಗಿಳಿಯಮರಿ, ನಾಯಿ ಕುನ್ನಿ ತಮ್ಮ ತಾಯಿಗೆ ಕೇಳಿ, ಈ ರಾಜಕುಮಾರನೊಡನೆ ಹೊರಟವು. ರಾಜಕುಮಾರ ಅವುಗಳೊಂದಿಗೆ ನಿಬಿಡ ಅರಣ್ಯ ಸೇರಿದ. ಅಲ್ಲಿದ್ದ ಸವಿಯಾದ ಹಣ್ಣು ತಿಂದ. ನೀರು ಕುಡಿದ. ಹೂವಿನ ಸರಮಾಡಿ ಕೊರಳಲ್ಲಿ ಹಾಕಿಕೊಂಡ. ಹೀಗೆ ಅಡವಿಯಲ್ಲಿ ಮನಸ್ಸಿಗೆ ಬಂದಂತೆ ಮೋಜು ಮಾಡುತ್ತ ಉತ್ತರ ದಿಕ್ಕಿನ ಹಾದಿಯಿಂದ ಹೊರಟಿದ್ದ. ಅಷ್ಟರಲ್ಲಿ ಒಂದು ಸುಂದರ ಚಿಗರಿಮರಿ ಅವನ ಕಣ್ಣಿಗೆ ಬಿತ್ತು. ಅದನ್ನು ಬೆನ್ನುಹತ್ತಿ ಹೋದ. ಅದು ಒಮ್ಮಿಂದೊಮ್ಮೆ ಮಾಯವಾಯಿತು. ರಾಜಕುಮಾರ ನಾಲ್ಕು ದಿಕ್ಕಿನ ಕಡೆ ಲಕ್ಷಕೊಟ್ಟು ನಿರೀಕ್ಷಿಸಿದ. ಆದರೆ ಅವನಿಗೆ ಚಿಗರಿ ಮರಿ ಕಾಣಲಿಲ್ಲ. ಆದರೆ ಒಂದು ಗಿಡದ ನೆರಳಿನಲ್ಲಿ ಓರ್ವ ಸುಂದರ ಸ್ತ್ರೀ ಕುಳಿತಿದ್ದು ಕಂಡನು. ಅವನಲ್ಲಿಗೆ ಹೋಗಿ ಅಂದನು, "ನಿಮ್ಮ ಕಣ್ಣಿಗೆ ಇಲ್ಲಿ ಎಲ್ಲಿಯಾದರೂ ಒಂದು ಚಿಗರಿಮರಿ ಬಿದ್ದಿತೆ? ನಾನು ಅದನ್ನು ಬೆನ್ನಟ್ಟಿ ಬಂದೆ. ಎಲ್ಲಿಯೋ ಮಾಯವಾಯಿತು."

"ನನಗೆ ಚಿಗರಿಮರಿ ಏನೂ ಗೊತ್ತಿಲ್ಲ. ನಾನು ಇಲ್ಲೇ ಹೀಗೆ ಕೂತಿರುತ್ತೇನೆ. ಬರಹೋಗುವವರಿಗೆ ಪಗಡಿ ಆಟಕ್ಕೆ ಕರೆಯುತ್ತೇಳ. ನೀವು ನನ್ನೊಡನೆ ಆಡುತ್ತೀರಾ? ಬರಿಯ ಆಟದಲ್ಲಿ ಸ್ವಾರಸ್ಯವಿಲ್ಲ. ಏನಾದರೂ ಪಣಕ್ಕೆ ಹಚ್ಚಿ ಆಡಬೇಕು."

ರಾಜಕುಮಾರನಿಗೆ ಒಲ್ಲೆ ಅನ್ನುವದು ಆಗಲಿಲ್ಲ. ಅವನು ಸ್ವಾಭಿಮಾನಿ. ಅವನು ಆಟಕ್ಕೆ ಕೂತ. 'ನಾನು ಈ ಮೊಲ ಹಚ್ಚುತ್ತೇನೆ. ನೀವು ಏನು ಹಚ್ಚುತ್ತೀರಿ' ಅಂದನು ಅವನು ಆ ಸ್ತ್ರೀಗೆ. 'ನಾನೂ ಒಂದು ಮೊಲ ಹಚ್ಚುತ್ತೇನೆ' ಅಂದಳು. ಇಬ್ಬರೂ ಆಟ ಆರಂಭಿಸಿದರು. ಆ ಸ್ತ್ರೀ ಸೋತಳು. ಮಲದಮರಿ ರಾಜಕುಮಾರನಿಗೆ ಕೊಟ್ಟಳು. ಎರಡೂ ಮೊಲದ ಮರಿ ಕೂಡಿದವು, ಕುಣಿಯಹತ್ತಿದವು. ಆ ಸ್ತ್ರೀ ಗಿಳಿಮರಿ ಹಚ್ಚಿ ಕಳಕೊಂಡಳು. ಒಳ್ಳೇ ರಭಸದಿಂದ, ಹೇವದಿಂದ ಆಡಿದಳು. ಆದರೂ ನಾಯಿಕುನ್ನಿಯನ್ನು ಕಳಕೊಂಡಳು. ಮೊಲದ ಮರಿಗಳು, ಗಿಳಿಮರಿಗಳು, ನಾಯಿಕುನ್ನಿಗಳು ಒಳ್ಳೇ ಆನಂದದಿಂದ ಆಡಹತ್ತಿದವು, ಕುಣಿಯಹತ್ತಿದವು.

ರಾಜಕುಮಾರನು "ಇನ್ನು ನನ್ನನ್ನೇ ನಾನು ಹಚ್ಚುತ್ತೇನೆ. ನೀವು ಸೋತರೆ ಏನು ಕೊಡುವಿರಿ'' ಎಂದು ಕೇಳಿದ. ''ಈ ಆಟದಲ್ಲಿ ನಾನು ಸೋತರೆ ನಿಮ್ಮಂಥ ಒಬ್ಬ ಸುಂದರ ರಾಜಕುಮಾರರನ್ನು ಕೊಡುತ್ತೇನೆ" ಎಂದು ಹೇಳಿದಳು ಆಸ್ತ್ರೀ.

ಆಟ ಸುರುವಾಯಿತು. ರಾಜಕುಮಾರ ಒಳ್ಳೇ ಹುರುಪಿನಿಂದ, ಆದರೆ ಜಾಗ್ರತೆಯಿಂದ ಆಡಲಿಕ್ಕೆ ಹತ್ತಿದ. ತನ್ನ ಅಣ್ಣ ಇರಬಹುದು, ಅವನ ಭೆಟ್ಟಿಯಾಬಹುದು ಎಂಬ ಆಸೆ ಅವನ ಹೃದಯದಲ್ಲಿ ಜಾಗೃತ ವಾಯಿತು. ಕೊನೆಗೊಮ್ಮೆ ಅವನು ಗೆದ್ದ. ಹಂದಿಯ ಮರಿಯನ್ನು ಮತ್ತೆ ರಾಜಕುಮಾರನನ್ನಾಗಿ ಮಾಡಿ ಅವಳು ಈ ರಾಜಕುಮಾರನಿಗೆ ಕೊಟ್ಟಳು. ಇಬ್ಬರು ರಾಜಕುಮಾರರು ಭೆಟ್ಟಿಯಾದರು, ಅಪ್ಪಿಕೊಂಡರು. ಅದು ರಾಮ-ಭರತನ ಭೆಟ್ಟಿಯಂತೆ ಕಂಡಿತು. ಅವರಿಬ್ಬರ ಹೃದಯ ತುಂಬಿ ಬಂದಿದ್ದವು. ಒಂದು ಕ್ಷಣ ಯಾರೂ ಮಾತನಾಡಲಿಲ್ಲ.

ಆ ಸ್ತ್ರೀ ಅಂದಳು, ''ಕುಮಾರರೆ, ನಿವು ಇನ್ನು ಹೋಗಿರಿ. ಆದರೆ ನಾನು ನಿಮಗೆ ಒಂದು ಮಾತು ಹೇಳುತ್ತೇನೆ, ಅದನ್ನು ಮರೆಯಬೇಡಿರಿ. ಹಿರಿ ರಾಜಕುಮಾರನನ್ನು ತಂದ ಗೋಸಾವಿ ಒಬ್ಬ ದುಷ್ಟ ಮನುಷ್ಯನಿದ್ದಾನೆ. ನಾಳೆ ಅವನು ಈ ರಾಜಕುಮಾರನನ್ನು ಬಲಿ ಕೊಡುವನು. ನಾಳೆ ಅವನು ಆ ಪರ್ಣಕುಟಿಗೆ ಬರುವನು. ಅಲ್ಲಿಂದ ಅವನು ಈ ರಾಜಕುಮಾರನನ್ನು ದೇವಿಯ ಗುಡಿಗೆ ಕರೆದೊಯ್ಯುವನು. ಅಲ್ಲಿ ದೇವಿಯ ಪೂಜೆ ಮಾಡುವನು. ಆ ಮೇಲೆ ಈ ರಾಜಕುಮಾರನಿಗೆ ಸಾಷ್ಟಾಂಗ ನಮಸ್ಕಾರ ಮಾಡಲು ಹೇಳುವನು. ಆಗ ನೀನು ನಮಸ್ಕಾರ ಮಾಡಿದ ಕೂಡಲೇ ಕತ್ತಿಯಿಂದ ನಿನ್ನ ರುಂಡ ಹಾರಿಸುವನು. ಆದ್ದರಿಂದ ನಾನು ಹೇಳಿದಂತೆ ಮಾಡಿದರೆ ರಾಜಕುಮಾರನ ಜೀವ ಉಳಿಯುವದು. ನಮಸ್ಕಾರ ಮಾಡು ಎಂದು ಹೇಳಿದ ಕೂಡಲೆ, ನೀನು ಅವನಿಗೆ ಹೇಳು, 'ನಾನು ರಾಜನ ಮಗ. ನನಗೆ ನಮಸ್ಕಾರ ಮಾಡುವದು ಹೇಗೆ ಗೊತ್ತಿಲ್ಲ. ನೀನು ತೋರಿಸು, ಆ ಮೇಲೆ ನಾನು ನಮಸ್ಕಾರ ಮಾಡುತ್ತೇನೆ.'' ಆ ಮೇಲೆ ಆ ಗೋಸಾವಿಯು ನಮಸ್ಕಾರ ಹೇಗೆ ಮಾಡುವದು ಎಂಬುವದನ್ನು ತೋರಿಸ

ತ್ತಾನೆ. ಅವನು ನಮಸ್ಕಾರ ಮಾಡಲಿಕ್ಕೆ ಬಾಗಿದ ಕೂಡಲೆ ಅವನ ರುಂಡ ಹಾರಿಸಿಬಿಡು. ಹೋಗಿರಿ. ಇನ್ನು ಸುಖದಿಂದ ಬಾಳಿರಿ.''

ರಾಜಕುಮಾರರಿಬ್ಬರು ಪರ್ಣಕುಟಿಗೆ ಬಂದರು. ಹಿರಿಯವನು ಒಳಗೆ ಇದ್ದ. ಸಣ್ಣವನು ಮಾತ್ರ ಹೊರಗೆ ಅಡಗಿಕೊಂಡನು. ರಾತ್ರಿಯಾಯಿತು. ಅಕಸ್ಮಾತ್ತಾಗಿ ಆ ಗೋಸಾವಿ ಬಂದನು. ರಾಜಕುಮಾರನನ್ನು ನೋಡಿ ಅವನಿಗೆ ಆನಂದವಾಯಿತು. ಹಕ್ಕಿಗಳು ನುಡಿಯಹತ್ತಿದವು. ಗೋಸಾವಿ ರಾಜಕುಮಾರನಿಗೆ ಅಂದನು, "ನೀನು ಇಲ್ಲಿ ಇದ್ದದ್ದು ನೋಡಿ ನನಗೆ ಹರ್ಷವಾಯಿತು. ನೀನು ನನ್ನ ಮಾತಿನಂತೆ ನಡೆದಿ. ನಾನು ನಿನಗೆ ಇವತ್ತು ದೇವಿಯ ಗುಡಿಗೆ ಕರಕೊಂಡು ಹೋಗುತ್ತೇನೆ. ನೀನು ದೇವಿಗೆ ನಮಸ್ಕಾರ ಮಾಡಬೇಕು.''

ಅವರಿಬ್ಬರೂ ಹೋದರು. ಚಿಕ್ಕ ರಾಜಕುಮಾರ ಸದ್ದಿಲ್ಲದೆ ಅವರ ಬೆನ್ನುಹತ್ತಿ ಹೊರಟನು. ಹಿರಿರಾಜಕುಮಾರ ಮತ್ತು ಗೋಸಾವಿ ಮಂದಿರ ಸೇರಿದರು. ಅಲ್ಲಿ ಒಳಗೆ ಬಂದೊಡನೆ ದೊಡ್ಡದಾದ ನಗುವಿನ ದನಿ ಕೇಳಿಸಿತು. ಅತ್ತಿತ್ತ ನೋಡಲು ತೂಗಬಿಟ್ಟ ಹನ್ನೊಂದು ರುಂಡ ಕಂಡು ಬಂದವು. ಆ ರುಂಡದಿಂದಲೇ ಹೊರಡುತ್ತಿತ್ತು ಆ ಹಾಸ್ಯಧ್ವನಿ. ಗೊಸಾವಿ ದೇವಿಯ ಪೂಜೆ ಮಾಡಲು ಕೂತ. ಶಂಖ ಊದಿದನು. ಗರ್ಭಗುಡಿ ಹೊರಗೆ ಬಂದು ರಾಜಕುಮಾರನಿಗೆ ಅಂದ, "ನಡಿ ತಮ್ಮಾ, ದೇವಿಗೆ ಸಾಷ್ಟಾಂಗ ನಮಸ್ಕಾರ ಮಾಡು.'' ನಮಸ್ಕಾರ ಹೇಗೆ ಮಾಡುವದು ನನಗೆ ಗೊತ್ತಿಲ್ಲ. ನೀವು ತೋರಿಸಿರಿ, ಆ ಮೇಲೆ ನಾನು ಮಾಡುತ್ತೇನೆ'' ಎಂದು ರಾಜಕುಮಾರ ಅಂದನು. ಗೋಸಾವಿ ನಮಸ್ಕಾರ ಮಾಡಲು ಬಾಗಿದಾ, ರಾಜಕುಮಾರ ಕತ್ತಿಯಿಂದ ಅವನ ರುಂಡವನ್ನೇ ಹಾರಿಸಿದ. ಗೋಸಾವಿಯ ರುಂಡ ಮುಂಡದಿಂದ ಬೇರೆಯಾದ ಕೂಡಲೇ ಹನ್ನೊಂದು ರಾಜಕುಮಾರರು ಜೀವಂತರಾಗಿ ಆ ಗುಡಿಯ ಹೊರಗೆ ಬಿದ್ದರು. ಚಿಕ್ಕ ರಾಜಕುಮಾರ ಒಳಗೆ ಬಂದನು. ಜೀವಂತರಾದ ಹನ್ನೊಂದು ರಾಜಕುಮಾರರಿಗೆ ಈ ಹಿರಿಯ ರಾಜಕುಮಾರ ಕೇಳಿದನು, "ನಾನು ಒಳಗೆ ಬಂದ ಕೂಡಲೆ ನೀವು ನಕ್ಕದ್ದೇತಕ್ಕೆ?'' "ಈ ಗೋಸಾವಿ

ನಮ್ಮನ್ನೆಲ್ಲ ಮೋಸ ಮಾಡಿ ಕರಕೊಂಡು ಬಂದ. ಮತ್ತು ಕೊಂದ. ನಮ್ಮಂತೆಯೆ ನೀನು ಮೋಸಕ್ಕೆ ಬಲಿ ಬಿದ್ದದ್ದು ನೋಡಿ ನಗೆ ಬಂದಿತು. ನೀನು ನಮಗೆ ಜೀವದಾನ ಮಾಡಿದಿ. ನಮ್ಮ ತಾಯಿ ತಂದೆಯುವರು ಮರಗುತ್ತಿರಬೇಕು. ನಿನ್ನ ಉಪಕಾರವನ್ನು ನಾವು ಹೇಗೆ ತೀರಿಸಬೇಕು. ಇನ್ನು ನಮ್ಮ ತಾಯಿ ತಂದೆಯುವರು ನಮಗೆ ಭೆಟ್ಟಿಯಾಗುವರು" ಎಂದು ಆ ಹನ್ನೊಂದು ರಾಜಕುಮಾರರು ಹೇಳಿದರು.

ಈ ರಾಜಕುಮಾರರಿಬ್ಬರು ಅವರಿಗೆಲ್ಲರಿಗೆ ಹೇಳಿದರು, "ಮೊದಲು ನಮ್ಮ ರಾಜಧಾನಿಗೆ ನಡೆಯಿರಿ. ಅಲ್ಲಿ ಕೆಲವು ದಿವಸ ವಾಸ ಮಾಡಿರಿ. ನಿಮ್ಮ ಸುದ್ದಿ ನಿಮ್ಮ ತಾಯಿ ತಂದೆಗಳಿಗೆ ತಿಳಿಸುತ್ತೇವೆ. ನಿಮ್ಮ ತಾಯಿ ತಂದೆಯುವರು ಬರುವರು. ಅದೊಂದು ದೊಡ್ಡ ಉತ್ಸವವೇ ಆಗುವದು. ಆಮೇಲೆ ನಿಮಗೆ ಅಪ್ಪಣೆ." ಅವರೆಲ್ಲರೂ ಒಪ್ಪಿದರು. ರಾಜಕುಮಾರ ರೀರ್ವರು ಮತ್ತು ಸಜೀವರಾದ ಹನ್ನೊಂದು ರಾಜಕುಮಾರರು, ಒಟ್ಟು ಹದಿಮೂರು ಜನ ರಾಜಕುಮಾರರು ರಾಜಧಾನಿಗೆ ಬಂದರು. ಅರಸ-ಅರಸಿಯರ ಆನಂದಕ್ಕೆ ಮಿತಿಯಿದ್ದಿಲ್ಲ. ಜನರೆಲ್ಲ ಅವರಿಗೆ ಸ್ವಾಗತ ಮಾಡಿದರು. ಊರಲ್ಲೆಲ್ಲ ಉತ್ಸವ ಮಾಡಿದರು. ಆ ಹನ್ನೊಂದು ರಾಜಕುಮಾರರ ಊರಿಗೆ ಹೇಳಿಕಳಿಸಲಾಯಿತು. ಅವರ ತಾಯಿ ತಂದೆಯುವರು ಧಾವಿಸಿ ಬಂದರು. ಈ ನಡೆದ ಆನಂದವನ್ನು ಬಣ್ಣಿಸುವವರಾರು? ಕೋಟ್ಯಾವಧಿ ಜನರಿಗೆ ಅನ್ನದಾನ, ವಸ್ತ್ರದಾನ ಮಾಡಲಾಯಿತು. ದುಡ್ಡು ಹಂಚಲಾಯಿತು. ಎಲ್ಲಿ ನೋಡಿದಲ್ಲಿ ಆನಂದ ಸಾಮ್ರಾಜ್ಯವೇ ಹಬ್ಬಿತ್ತು. ಹನ್ನೊಂದು ರಾಜಕುಮಾರರು ತಮ್ಮ ತಮ್ಮ ರಾಜಧಾನಿಗೆ ಪ್ರಯಾಣ ಬೆಳಿಸಿದರು. ರಾಜಕುಮಾರರಿಬ್ಬರು, ಮೊಲಗಳೆರಡು, ಗಿಳಿಮರಿಗಳೆರಡು, ನಾಯಿ ಕುನ್ನಿಗಳೆರಡು ಎಲ್ಲವೂ ಆನಂದದಲ್ಲಿವೆ. ಅರಸನ ಮುದ್ದಿನ ಮಗ ಅರಸನಿಗೆ ದೊರೆತ. ಅರಸಿಗೆ ಅವಳ ಮುದ್ದು ಮಗ ಉಳಿದ. ಪ್ರಜೆಗಳಿಗೆ ಸುಖವಾಯಿತು. ಅವರಂತೆ ನಮಗೆಲ್ಲರಿಗೂ ಸುಖವಾಗಲಿ ಎಂಬುದೇ ಹಾರೈಕೆ.

ಕತೆ ತೀರಿತು। ಸಕ್ಕರಿ ಕೊಟ್ಟಿತು.

---

# ಚಿನ್ನದ ಸರಪಳಿ!

೫

ಒಬ್ಬ ಅರಸನಿದ್ದ. ಅವನಿಗೆ ಇಬ್ಬರು ಅರಸಿಯರು. ಇಬ್ಬರಿಗೂ ಮಕ್ಕಳಾಗಲಿಲ್ಲ. ರಾಜ್ಯಕ್ಕೆ ವಾರಸದಾರರಿಲ್ಲವಲ್ಲ ಎಂದು ಅರಸನಿಗೆ ಚಿಂತೆ. ಈ ವಿಚಾರದಿಂದ ಅವನು ಖಿನ್ನನಾಗುತ್ತಿದ್ದ. ಅರಸನ ದುಃಖ ನೋಡಿ ಅರಸಿಯರಿಬ್ಬರಿಗೂ ವ್ಯಥೆ.

ಒದು ದಿವಸ ಒಬ್ಬ ಸಾಧು ಬಂದ. ಅಲ್ಲಿ ಒಬ್ಬ ಅರಸಿ ಇದ್ದಳು. ಅವಳು ಅಳುವದನ್ನು ಆ ಸಾಧು ನೋಡಿ ಅಂದನು, "ಅರಸಿ! ನಿನ್ನ ಕಣ್ಣಲ್ಲಿ ನೀರೇ? ನಿನಗೇತರ ಕೊರತೆ? ರಾಜ್ಯವಿದೆ, ಧನವಿದೆ, ರಥ, ಕುದುರೆ, ಆನೆ ಎಲ್ಲವೂ ಇವೆ. ಅಳುವದು ಬಡವರ ಭಾಗ್ಯ. ನಿಮ್ಮಂಥ ಭಾಗ್ಯವಂತರು ಅಳುವದೇಕೆ? ದೇವರು ಇಂಥ ಭಾಗ್ಯ ನಿಮಗೆ ಕೊಟ್ಟಿದ್ದಾನೆ, ಅಳಬೇಡಿರಿ; ಸುಖದಿಂದ ಬಾಳಿರಿ!"

ಕಂಬನಿ ಸುರಿಸುತ್ತ ಅರಸಿ ಅಂದಳು, "ಬೆಳೆ ಇಲ್ಲದ ಹೊಲಕ್ಕೆ ಬೆಲೆ ಇಲ್ಲ; ತಾವರೆ ಇಲ್ಲದ ಸರೋವರಕ್ಕೆ ಶೋಭೆ ಇಲ್ಲ; ಚಂದ್ರನಿಲ್ಲದ ಮುಗಿಲು ಕಂಗೊಳಿಸುವದಿಲ್ಲ; ಹಣ್ಣು ಇಲ್ಲದ ಮರ ಮಣ್ಣು ಇದ್ದಹಾಗೆ. ಅದರಂತೆ ಮಕ್ಕಳಿಲ್ಲದ ಹೆಂಗಸಿನ ಬಾಳು, ಹಾಳು. 'ಅವ್ವಾ' ಎಂದು ನನ್ನನ್ನು ಕರೆಯುವವರಾರು ಇಲ್ಲ. ಮಕ್ಕಳಿದ್ದವಳೇ ಭಾಗ್ಯವಂತಳು, ದೇವರು ಚಿನ್ನ ಕೊಟ್ಟಿದ್ದಾನೆ. ಆದರೆ ಚಿನ್ನದಂಥ ಬಾಲಕನನ್ನು ದಯಪಾಲಿಸಲಿಲ್ಲ. ಅರಸನ ದುಃಖ ನೋಡಿದರಂತೂ ಬಹಳ ವ್ಯಸನವೆನಿಸುತ್ತದೆ. ನನಗೊಂದು ಮಗುವನ್ನು ದಯಪಾಲಿಸಿರಿ."

ಸಾಧುವಿನ ಕರಳು ಕರಗಿತು. ಅವನು ಹೇಳಿದ, "ನಿನಗೆ ನನ್ನ ಕೃಪೆಯಿಂದ ಮಗುವೊಂದು ಆಗುವದು ನಿಜ. ಆದರೆ ಇನ್ನೊಬ್ಬ ಅರಸಿ ಆ ಮಗುವನ್ನು ದ್ವೇಷಿಸುವಳು. ಅವನನ್ನು ಕೊಲ್ಲಲು ಯತ್ನಿಸುವಳು,

ತಿದ್ದರಿಂದ ನಾನೊಂದು ಹಂಚಿಕೆ ಮಾಡುವೆ. ಈ ಊರ ಹೊರಗೆ ಒಂದು ಸರೋವರವಿದೆ. ಅದರಲ್ಲಿ ಒಂದು ಹೊಂಬಣ್ಣದ ಮೀನವಿದೆ. ಅದರ ಹೊಟ್ಟೆಯಲ್ಲಿ ಒಂದು ಚಿನ್ನದ ಸರಪಳಿಯಲ್ಲಿ ನಿನ್ನ ಮಗನ ಪ್ರಾಣವನ್ನು ಇಡುತ್ತೇನೆ. ಆ ಸರಪಳಿ ಅಲ್ಲಿ ಇರುವ ವರೆಗೆ ನಿನ್ನ ಮಗನ ಜೀವ ಸುರಕ್ಷಿತ ವಾಗಿರುವದು.

ಅರಸಿಗೆ ವರ ಕೊಟ್ಟು ಸಾಧು ಹೋದನು. ಯೋಗ್ಯ ಕಾಲದ ಮೇಲೆ ಅರಸಿಗೆ ಒಬ್ಬ ಮಗ ಹುಟ್ಟಿದ. ಬಹುಕಾಲದ ಮೇಲೆ ಹುಟ್ಟಿದ ಮಗು! ಎಷ್ಟು ಆನಂದ! ಎಷ್ಟು ಉತ್ಸವಗಳು!! ಎಂಥ ಉತ್ಸಾಹ!!! ಮಗು ನಕ್ಷತ್ರದಂತೆ ಚೆಲುವಾಗಿತ್ತು. ಎರಡನೆ ಅರಸಿಯ ಹೊಟ್ಟೆಯಲ್ಲಿ ಬೆಂಕಿ. ಅರಸ ಅವಳನ್ನು ಕೇಳದಂತಾದ. ಅವಳು ಈ ಅರಸಿಯನ್ನು ದ್ವೇಷಿಸ ಹತ್ತಿದಳು. ಮಗುವನ್ನು ದ್ವೇಷಿಸಹತ್ತಿದಳು. ಹುಡುಗ ಅವಳ ಹತ್ತಿರ ಹೋದರೆ ಅವಳು ಹುಡುಗನನ್ನು ಕಾಡುತ್ತಿದ್ದಳು, ಅಳಿಸುತ್ತಿದ್ದಳು.

ರಾಜಕುಮಾರ ದಿನದಿನಕ್ಕೆ ಬೆಳೆಯಹತ್ತಿದ. ಐದಾರು ವರ್ಷದವ ನಾದಮೇಲೆ ಹೊರಗೆ ಅಡ್ಡಾಡಹತ್ತಿದ. ಎಲ್ಲರೊಡನೆ ಒಳ್ಳೇ ರೀತಿಯಿಂದ ನಡೆದುಕೊಳ್ಳುತ್ತಿದ್ದ. ಅವನಿಗೆ ಗರ್ವವಿದ್ದಿಲ್ಲ. ಕಾಣಲಿಕ್ಕೆ ಚಂದ ಮತ್ತು ಗುಣದಿಂದ ಸೊಗಸಾದ ಸ್ವಭಾವದವನು. ಅವನಿಗೆ ಪಾರಿವಾಳದ ಮೇಲೆ ಪ್ರೀತಿವಿಶೇಷ. ಒಂದು ದಿನ ಅವನ ಸೇರಿಕೆಯ ಪಾರಿವಾಳ ಮಲತಾಯಿಯ ಅರಮನೆ ಸೇರಿತು. ರಾಜಕುಮಾರ ಅಲ್ಲಿಗೆ ಹೋದ. "ನಿನ್ನ ಪಾರಿವಾಳ ಬಂದು ನನ್ನ ಮನೆಯಲ್ಲಿ ಹೊಲಸು ಮಾಡುತ್ತದೆ. ನಾನು ಅದನ್ನು ಕೊಂದುಬಿಡುತ್ತೇನೆ. ನಿಮ್ಮದು ಆಟ ಆಗುತ್ತದೆ, ಆದರೆ ನಮಗೆ ಮಾತ್ರ ತ್ರಾಸು. ನಡೆ, ಹೋಗು ಇಲ್ಲಿಂದ" ಅಂದಳು ಮಲತಾಯಿ. ರಾಜ ಕುಮಾರ ಅತ್ತನು. ಕೊನೆಗೊಮ್ಮೆ ಅವಳು ಅವನ ಪಾರಿವಾಳ ಕೊಟ್ಟಳು. ಅವನು ಆನಂದದಿಂದ ತನ್ನ ಅರಮನೆಗೆ ತೆರಳಿದನು.

ದಿನಾಲೂ ಹೀಗೆ ನಡೆಯಿತು. ಪಾರಿವಾಳ ನಿತ್ಯ ಮಲತಾಯಿಯ ಮನೆಗೆ ಹೋಗುತ್ತಿತ್ತು. ಒಂದು ದಿವಸ ಮಲತಾಯಿ ಏನು ಮಾಡಿದರೂ ಪಾರಿವಾಳ ಕೊಡಲು ಒಪ್ಪಲಿಲ್ಲ. "ನೀನು ಹೇಳಿದ ಮಾತು ನಾನು

ಕೇಳುವೆ. ನನ್ನ ಪಾರಿವಾಳ ಕೊಡು" ಎಂದು ರಾಜಕುಮಾರ ಅವಳಿಗೆ ವಚನ ಕೊಟ್ಟ. "ಹಾಗಾದರೆ ನಿನ್ನ ಪ್ರಾಣ ಎಲ್ಲಿದೆ, ನಿನ್ನ ತಾಯಿಯನ್ನು ಕೇಳಿ ಬಾ" ಅಂದಳು. ''ಮತ್ತು ಅವಳು ಹೇಳಿದ್ದು ನನಗೆ ಬಂದು ತಿಳಿಸು. ನೀನು ಒಪ್ಪಿದರೆ ಮಾತ್ರ ಪಾರಿವಾಳ ಕೊಡುತ್ತೇನೆ." ರಾಜಕುಮಾರ ಅದಕ್ಕೆ ಒಪ್ಪಿದ. ಪಾರಿವಾಳ ತಕ್ಕೊಂಡು ಹೋದ. ಆಟದ ಭರದಲ್ಲಿ ಮಲ ತಾಯಿಗೆ ಕೊಟ್ಟ ವಚನ ಮರೆತು ಬಿಟ್ಟ. ಮತ್ತೆ ಮರುದಿವಸ ಅವನ ಪಾರಿವಾಳ ಮಲತಾಯಿಯ ಅರಮನೆ ಸೇರಿತು. ಅವನು ಅಲ್ಲಿಗೆ ಹೋಗಿ ಪಾರಿವಾಳ ಕೊಡಲು ಕೇಳಿದ. ''ಕೊಡುವದಿಲ್ಲ ಹೋಗು, ನೀನು ಸುಳ್ಳನು ಕೊಟ್ಟ ವಚನ ಪಾಲಿಸುವದಿಲ್ಲ" ಎಂದು ಮಲತಾಯಿ ಅವನನ್ನು ಜರಿದಳು. "ವಿದ್ಯೆಯ ಆಣೆ, ನಾನು ಇವತ್ತು ನನ್ನ ತಾಯಿಗೆ ಕೇಳಿ, ಅವಳು ಹೇಳಿದ್ದು ನಿಮಗೆ ಬಂದು ತಿಳಿಸುತ್ತೇನೆ. ನೋಡಿರಿ ಇದೊಂದು ಸಾರಿ" ಅಂದನು ರಾಜಕುಮಾರ. "ಒಳ್ಳೇದು" ಅಂದು ಅವಳು ಅವನ ಪಾರಿ ವಾಳ ತಿರುಗಿ ಕೊಟ್ಟಳು.

ರಾಜಕುಮಾರ ಪಾರಿವಾಳ ತಕ್ಕೊಂಡು ತನ್ನ ತಾಯಿಯ ಬಳಿಗೆ ಹೋದ, ತಾಯಿ ಅವನಿಗೆ ಮುದ್ದಿಟ್ಟಳು. ಹಣೆಯ ಮೇಲಿನ ಬೆವರು ಸೆರಗಿ ನಿಂದ ಒರಿಸಿದಳು. ಕೂದಲದ ಮೇಲೆ ಕೈಯಾಡಿಸಿದಳು. ಮಗು ತಾಯಿಗೆ ಕೇಳಿದ, "ತಾಯೀ, ನನ್ನ ಪ್ರಾಣ ಎತ್ತರಲ್ಲಿದೆ ಹೇಳು. ಸುಳ್ಳು ಹೇಳ ಬೇಡ. ಅದು ಪಾಪ. ನೀನು ಹೇಳದಿದ್ದರೆ ನಾನು ಊಟ ಮಾಡುವದಿಲ್ಲ." ''ಮಗು, ಈ ಹುಚ್ಚು ನಿನ್ನ ತಲೆಯಲ್ಲಿ ಹಾಕಿದವರಾರು? ಇಂಥ ಮಾತು ಕೇಳುವದು ಚಿಕ್ಕವರಿಗೆ ಯೋಗ್ಯವಲ್ಲ. ನೀನು ತಿನಬೇಕು, ಆಡಬೇಕು. ಸುಖದಿಂದಿರಬೇಕು'' ಎಂದು ತಾಯಿ ಅಂದಳು. ಮಗ ಹಟ ಬಿಡಲಿಲ್ಲ, ಅಳಲಾರಂಭಿಸಿದ. ಕೊನೆಗೊಮ್ಮೆ ತಾಯಿ ಕನಿಕರ ಬಂದು ಹೇಳಿದಳು, ''ಮಗು, ಅಳಬೇಡ. ನಾನು ನಿನಗೆ ಹೇಳುತ್ತೇನೆ. ಆದರೆ ಇದನ್ನು ಯಾರಿಗೂ ಹೇಳಬೇಡ. ನಮ್ಮ ಊರ ಹೊರಗೆ ಒಂದು ದೊಡ್ಡ ಕೆರೆ ಇದೆ. ಅಲ್ಲಿ ಒಂದು ಹೊಂಬಣ್ಣದ ಮೀನವಿದೆ. ಅದರ ಹೊಟ್ಟೆಯಲ್ಲಿ ಒಂದು ಚಿನ್ನದ ಸರಪಳಿ ಇದೆ. ಆ ಸರಪಳಿಯಲ್ಲಿ ನಿನ್ನ ಪ್ರಾಣವಿದೆ. ನೋಡು, ಇದನ್ನು ಯಾರಿಗೂ ಹೇಳಬೇಡ."

ರಾಜಕುಮಾರ ಹೊರಬಿದ್ದನು. ಮಲತಾಯಿಯ ಕಡೆಗೆ ಹೋದ. ಅವನ ಮನಸಿನಲ್ಲಿ ಕಪಟವಿರಲಿಲ್ಲ. ಮಕ್ಕಳ ಮನಸು ಗಂಗೆಯ ನೀರಿನಂತೆ ನಿರ್ಮಲವಿರುತ್ತದೆ. ಮಕ್ಕಳು ಎಲ್ಲರನ್ನೂ ನಂಬುತ್ತಾರೆ. ರಾಜಕುಮಾರ ತಾಯಿ ಹೇಳಿದ್ದನ್ನೆಲ್ಲ ಮಲತಾಯಿಗೆ ಹೇಳಿದ.

ಮಲತಾಯಿ ಮರುದಿನ ಊರೊಳಗಿನ ಜಾಲಗಾರನೊಬ್ಬನನ್ನು ಕರಿಸಿದಳು. "ಈ ದಿನ ರಾತ್ರಿ ನೀನು ಊರಹೊರಗಿದ್ದ ಕೆರೆಗೆ ಹೋಗು. ಅಲ್ಲಿ ಒಂದು ಹೊಂಬಣ್ಣದ ಮೀನ ಅದೆ. ಅದನ್ನು ತಕ್ಕೊಂಡು ನನ್ನ ಕಡೆಗೆ ಬಾ." ಅವನಿಗೆ ಮಲತಾಯಿ ಹೇಳಿದಳು.

ರಾತ್ರಿಯಾಯಿತು. ಎಲ್ಲರೂ ಮಲಗಿದ್ದರು. ಗೂಗಿ ಮಾತ್ರ ಅತ್ತಿತ್ತ ಹಾರಾಡುತ್ತಿದ್ದವು. ಆ ಜಾಲಗಾರ ಕೆರೆಗೆ ಹೋದ. ಒಂದು ದೊಡ್ಡ ಜಾಲ ನೀರಿನಲ್ಲಿ ಒಗೆದ. ಬಹಳ ಮೀನ ಅದರಲ್ಲಿ ಸಿಕ್ಕವು. ಆದರೆ ಹೊಂಬಣ್ಣದ ಮೀನ ಇದ್ದಿಲ್ಲ. ಎರಡ ಮೂರಾವರ್ತಿ ಜಾಲ ಹಾಕಿದರೂ ಸಿಕ್ಕಲಿಲ್ಲ. ಬೇಸತ್ತು ಇದು ಕೊನೆಯ ಬಾರಿ ಅಂದು ಅವನು ಮತ್ತೆ ಜಾಲ ಒಗೆದ. ಈ ಬಾರಿ ಆ ಮೀನ ಅದರಲ್ಲಿ ಸಿಕ್ಕಿತು. ಅವನಿಗೆ ಹರ್ಷವಾಯಿತು.

ಆ ಮೀನ ಅವನು ಒಂದು ಚೀಲದಲ್ಲಿ ಹಾಕಿದ. ಮತ್ತು ಬೆಳಗಾಗು ವದನ್ನು ಕಾಯುತ್ತ ಕುಳಿತ.

ಬೆಳಗಾಯಿತು. ಸೂರ್ಯೋದಯವಾಯಿತು. ಮೊಗ್ಗೆಗಳು ಅರಳಿ ದವು. ಕೆರೆಯಲ್ಲಿಯ ತಾವರೆಗಳು ಮುಖ ಮೇಲೆ ಮಾಡಿ ಸೂರ್ಯನಾರಾ ಯಣನ ದರ್ಶನ ತಕ್ಕೊಂಡವು. ಆದರೆ ರಾಜಕುಮಾರನು ಇನ್ನೂ ಎದ್ದಿರ ಲಿಲ್ಲ. ಅವನ ಮುಖದ ಮೇಲೆ ಹಾಸ್ಯವಿರಲಿಲ್ಲ. ಅವನ ತಾಯಿ ಅವನ ಬಳಿ ಹೋದಳು. "ಏಳು ಕಂದಾ, ಹೊತ್ತಾಯಿತು. ಮಂದಿರದಲ್ಲಿ ಆರತಿ ನಡೆದಿದೆ. ಏಳು ಮುದ್ದುಮಗು. ನಿನ್ನ ಮುಖ ಇಷ್ಟೇಕೆ ಬಾಡಿದೆ ಇಂದು. ರಾತ್ರಿ ನಿದ್ದೆ ಬರಲಿಲ್ಲವೋ? ನಿನಗೆ ಮೈಯಲ್ಲಿ ನೆಟ್ಟಗಿಲ್ಲವೋ?"

ರಾಜಕುಮಾರನಿಗೆ ಮೈಯಲ್ಲಿ ನೆಟ್ಟಗಿದ್ದಿಲ್ಲ. ಅವನ ಪ್ರಾಣ ವ್ಯಾಕುಲ ವಾಗಿದ್ದವು. ಅರಮನೆಯಲ್ಲೆಲ್ಲ ಗಡಿಬಿಡಿ, ಅರಸ ಬಂದ ವೈದ್ಯರೆಲ್ಲರೂ

ಬಂದರು. ನಾಡಿಪರೀಕ್ಷೆಯಾಯಿತು. ಎಲ್ಲರ ಮುಖಬಾಡಿದವು. "ಅವ್ವಾ, ಅವ್ವಾ" ಎಂದು ರಾಜಕುಮಾರ ನಡುನಡುವೆ ಕೂಗುತ್ತಿದ್ದ. ಮತ್ತೆ ಗಾಬರಿಯಾಗುತ್ತಿದ್ದ. ಎಲ್ಲರ ಕಣ್ಣಿನಲ್ಲಿ ನೀರು ಸುರಿಯುತ್ತಿದ್ದವು.

ಇತ್ತ ಜಾಲಗಾರ ಮಲತಾಯಿಯ ಅರಮನೆಗೆ ಬಂದ. ಆ ಮೀನವನ್ನು ಅವಳಿಗೆ ಕೊಟ್ಟ. ಆ ರಕ್ಕಸಿಗೆ ವಿಲಕ್ಷಣವಾದ ಆನಂದವಾಯಿತು.

ಜಾಲಗಾರನಿಗೆ ತನ್ನ ಕೊರಳೊಳಗಿನ ಮುತ್ತಿನ ಸರ ಕೊಟ್ಟಳು. ಜಾಲಗಾರನಿಗೆ ಹರ್ಷವಾಯಿತು. "ಇಡೀ ರಾತ್ರಿ ದುಡಿದದ್ದು ಸಾರ್ಥಕವಾಯಿತು. ನನ್ನ ಬಡತನ ಇಲ್ಲದಂತಾಯಿತು. ಹೆಂಡತಿ ಮಕ್ಕಳು ಸುಖದಿಂದ ಬಾಳುವರು" ಎಂದು ಅವನು ಮನಸಿನಲ್ಲಿ ಅಂದನು.

ಜಾಲಗಾರ ಹೋದ. ಮಲತಾಯಿ ಕೈಯಲ್ಲಿ ಒಂದು ಚಾಕು ತಕ್ಕೊಂಡಳು. ಇತ್ತ ರಾಜಕುಮಾರ ಕಳವಳಿಸಿದ. "ಯಾರಾದರೂ ನನ್ನ ಮಗನ ಪ್ರಾಣ ಉಳಿಸಿರಿ" ಎಂದು ತಾಯಿ ಕಳವಳಿಸಿ ಚೀರಿದಳು.

ಮಲತಾಯಿ ಮೀನವನ್ನು ಹೆಚ್ಚಿದಳು. ಅದರ ಹೊಟ್ಟೆಯಲ್ಲಿದ್ದ ಚಿನ್ನದ ಸರಪಳಿ ತಕ್ಕೊಂಡು ತನ್ನ ಕೊರಳಲ್ಲಿ ಹಾಕಿಕೊಂಡಳು. ಅವಳು ಅದನ್ನು ಕೊರಳಲ್ಲಿ ಹಾಕಿದ ಕೂಡಲೇ ರಾಜಕುಮಾರನ ಜೀವಹೋಯಿತು. ತಾಯಿ ತೊಡೆಯ ಮೇಲೆ ಮರಣ. ಆ ಶೋಕವನ್ನು ಬಣ್ಣಿಸುವವರಾರು ? ತಾಯಿಗೆ ಆಗುವ ಪುತ್ರಶೋಕ ತಾಯಿಗೆ ಗೊತ್ತು. ಎರಡನೆಯವರಿಗೆ ಅದು ತಿಳಿಯುವದು ಸಾಧ್ಯವಿಲ್ಲ.

ರಾಜಪುತ್ರನ ಶವಕ್ಕೆ ಅಗ್ನಿ ಕೊಡುವಷ್ಟರಲ್ಲಿ ಅಮಾತ್ಯನ ಮಗನು ಬಂದನು. ರಾಜಕುಮಾರನು ಅವನು ಪ್ರೀತಿಯ ಗೆಳೆಯರು. "ಈ ದೇಹ ಸುಡಬೇಡಿರಿ, ನನಗೆ ಕೊಡಿರಿ; ದಯಮಾಡಿ ಇಲ್ಲ ಅನ್ನಬೇಡಿರಿ" ಎಂದು ಅವನು ಅಂಗಲಾಚಿ ಬೇಡಿಕೊಂಡನು. ಅರಸ ಅದಕ್ಕೆ ಒಪ್ಪಿಕೊಂಡನು. ಎಲ್ಲ ಜನರು ಸ್ಮಶಾನದಿಂದ ಮನೆಗೆ ತೆರಳಿದರು. ಪ್ರಧಾನ ಕುಮಾರನು ರಾಜಕುಮಾರನ ದೇಹವನ್ನು ಪಲ್ಲಕ್ಕಿಯೊಳಗೆ ಹಾಕಿ ಮನೆಗೆ ತಂದನು. ಅಲ್ಲಿಂದ ಅವನು ಊರಹೊರಗಿದ್ದ ತನ್ನ ತೋಟಕ್ಕೆ ಒಯ್ದನು. ಅಲ್ಲಿ ಒಂದು ಉತ್ತಮವಾದ ಮನೆ ಕಟ್ಟಿಸಿದ. ಒಂದೇ ಒಂದು ದಿನದಲ್ಲಿ ಆ ಮನೆ

ಕಟ್ಟಿಸಿದ. ಆ ಮನೆಯಲ್ಲಿ ಒಂದು ಸುಂದರವಾದ ಮಂಚ ಇಟ್ಟ. ಅದರ ಮೇಲೆ ರಾಜಕುಮಾರನ ದೇಹವನ್ನು ಇಟ್ಟನು.

ರಾತ್ರಿಯ ವೇಳೆಯಾಯಿತು. ಮಲತಾಯಿಯ ಆನಂದಕ್ಕೆ ಮಿತಿ ಇದ್ದಿಲ್ಲ. ಅವಳಿಗೆ ಅತಿಶಯ ಆನಂದವಾದದ್ದರಿಂದ ನಿದ್ದೆ ಬರಲಿಲ್ಲ. ಕೊರಳೊಳಗಿನ ಸರಪಳಿ ನಡುತ್ತಿತ್ತು. ಆದ್ದರಿಂದ ಅವಳು ಅದನ್ನು ತೆಗೆದು ತಲೆಗಿಂಬಿನ ಕೆಳಗೆ ಇಟ್ಟಳು. ಅವಳಿಗೆ ನಿದ್ದೆ ಹತ್ತಿತು. ಸರಪಳಿ ಕೊರಳೊಳಗಿಂದ ತೆಗೆದ ಕೂಡಲೆ ರಾಜಕುಮಾರ ಎಚ್ಚತ್ತನು. ಅವನು ಜೀವಂತನಾಗಿ ಎದ್ದು ನೋಡಲು ಅಲ್ಲಿ ಯಾರೂ ಇದ್ದಿಲ್ಲ. ತೋಟದಲ್ಲಿ ಅಡ್ಡಾಡಿದ. ಕೆಲಹೊತ್ತಿನ ಮೇಲೆ ಅವನಿಗೆ ದಣುವಾಯಿತು. ಆಗ ಅವನು ಮಂಚದ ಮೇಲೆ ಮಲಗಿದನು. ಈ ಕ್ರಮ ದಿನಾಲು ನಡೆಯಿತು. ಹಗಲು ರಾಜಕುಮಾರ ಸತ್ತಿರಬೇಕು, ರಾತ್ರಿ ಜೀವಂತನಾಗುತ್ತಿದ್ದ. ಪ್ರಧಾನಕುಮಾರ ಒಂದು ದಿನ ಮುಂಜಾನೆ ತೋಟಕ್ಕೆ ಬಂದಿದ್ದ. ಅವನು ಮನೆಯಲ್ಲಿ ಸೇರಿದ. ಅಲ್ಲಿ ಅವನು ರಾಜಕುಮಾರ ಒಂದು ಮಗ್ಗಲ ಮೇಲೆ ಮಲಗಿಕೊಂಡಂತೆ ಅನಸಿತು. ಅವನ ಮುಖದ ಮೇಲೆ ಲಕ್ಷಣವಿದ್ದಿತು. ದೇಹ ಕೊಳೆತಿದ್ದಿಲ್ಲ. ಅವನಿಗೆ ಆಶ್ಚರ್ಯವೆನಿಸಿತು. ರಾತ್ರಿ ಬರಬೇಕೆಂದು ಅವನು ಮನಸಿನಲ್ಲಿ ಮಾಡಿಕೊಂಡು ಹೋದನು.

ರಾತ್ರಿಯಾಯಿತು. ಬೆಳದಿಂಗಳು ಚನ್ನಾಗಿ ಬಿದ್ದಿತ್ತು. ಮಲತಾಯಿ ಮಲಗಿದಳು. ಮಲಗುವಾಗ ನಿತ್ಯದಂತೆ ಸರಪಳಿ ತೆಗೆದಿದ್ದಳು. ಇತ್ತ ರಾಜಕುಮಾರ ಎಚ್ಚತ್ತನು. ಆದರೆ ಅವನು ಅಶಕ್ತನಾಗಿದ್ದ. ಅಲ್ಲಿಯೇ ಹಾಸುಗೆಯಲ್ಲಿ ಬಿದ್ದು ವಿಚಾರ ಮಾಡುತ್ತಿದ್ದನು. ಅಷ್ಟರಲ್ಲಿ ಪ್ರಧಾನಕುಮಾರ ಅಲ್ಲಿ ಬಂದನು. ಅವನನ್ನು ನೋಡಿದೊಡನೆ ರಾಜಕುಮಾರ ಎದ್ದು ಕೂತನು. ಗೆಳೆಯರಿಬ್ಬರು ಭೆಟ್ಟಿಯಾದರು. ಇಬ್ಬರ ಕಂಠಗಳು ಸದ್ಗತಿತವಾದವು. ರಾಜಕುಮಾರ ಅಂದನು, "ನಾನು ದಿನಾಲು ರಾತ್ರಿ ಎದ್ದು ಅಡ್ಡಾಡುತ್ತೇನೆ. ಬೆಳಗಾಗುವದನ್ನು ಮಾತ್ರ ನೋಡಿಲ್ಲ. ಈ ರೀತಿ ರಾತ್ರಿ ಜೀವಂತ ಮತ್ತು ಹಗಲು ಮರಣ ಹೀಗೆ ನಡೆದಿದೆ." ಪ್ರಧಾನಕುಮಾರನಿಗೆ ಬಹಳ ಆಶ್ಚರ್ಯವೆನಿಸಿತು. ಅವನು ತನ್ನ ಗೆಳೆಯನಿಗೆ

ಅಂದನು, ''ಅದು ಏನೇ ಇರಲಿ, ಈಗ ನಾನು ತಂದ ಹಣ್ಣು ತಿನ್ನು. ನಾನು ದಿನಃ ು ನಿನಗೆ ತಿನ್ನಲಿಕ್ಕೆ ತಂದು ಕೊಡುವೆ. ನೀನು ಯಾವ ಚಿಂತೆ ಹಚ್ಚಿಕೊಳ್ಳಬೇಡ. ಈ ಒಗಟು ಬಿಡಿಸೇತೀರಬೇಕು.'' ಇಬ್ಬರೂ ಬಹಳ ಹೊತ್ತಿನ ವರೆಗೆ ಬೆಳದಿಂಗಳಲ್ಲಿ ಅಡ್ಡಾಡಿದರು. ಮತ್ತು ಮಲಗಿದರು. ಹಕ್ಕಿಗಳ ಸಪ್ಪಳದಿಂದ ಪ್ರಧಾನ ಕುಮಾರನಿಗೆ ಎಚ್ಚರಿಕೆಯಾಯಿತು. ಆದರೆ ಅವನ ಮಿತ್ರ ಅಲ್ಲಿಯೇ ಸತ್ತುಬಿದ್ದಿದ್ದ.

ಈ ರೀತಿ ಪ್ರಧಾನ ಕುಮಾರ ದಿನಾಲು ರಾತ್ರಿ ಇಲ್ಲಿ ಬರಬೇಕು. ಗೆಳೆಯನಿಗೆ ತಿನ್ನಲಿಕ್ಕೆ ಕೊಡಬೇಕು. ಒಂದೊಂದು ರಾತ್ರಿ ಅಲ್ಲಿಯೇ ಮಲ ಗುತ್ತಿದ್ದ. ಇಲ್ಲದಿದ್ದರೆ ಒಮ್ಮೊಮ್ಮೆಮನೆಗೆ ಹೋಗುತ್ತಿದ್ದ. ತನಗೆ ಎಲ್ಲಿ ಯಾದರೂ ದೂರ ಹೋಗುವದಿದ್ದರೆ, ಮೂರು ನಾಲ್ಕುದಿವಸದ ತಿನಸನ್ನು ಕಪಾಟಿನಲ್ಲಿ ಇಟ್ಟುಹೋಗುತ್ತಿದ್ದ. ಈ ರೀತಿ ಕ್ರಮ ಸಾಗಿತ್ತು.

ಒಂದು ದಿವಸ ದೂರ ಒಂದು ಹಾದಿಯುಗುಂಟ ಒಬ್ಬ ಬಡ ಹೆಣ್ಣು ಮಗಳು ಹೊರಟಿದ್ದಳು. ಅವಳಿಗೆ ವಯಸ್ಸಾಗಿದ್ದವು. ಅವಳೊಡನೆ ಅವಳ ಮಗಳಿದ್ದಳು. ಮುದುಕ ತಾಯಿಯ ಕೈ ಹಿಡಿದು ಆ ಹುಡಿಗಿ ಸಾಗಿದ್ದಳು. ಹಾದಿಯಲ್ಲಿ ಅವರಿಗೆ ಒಂದು ವಿಚಿತ್ರ ಪ್ರಾಣಿ ಕಂಡಿತು. ಮುದುಕಿ ಆ ಪ್ರಾಣಿಗೆ ಅಂದಳು, "ಯಾರು ನೀನು ? ನಮ್ಮೊಡನೆ ನೀನು ಬರುವ ದಾದರೂ ಏತಕ್ಕೆ ? ನನಗೆ ನಿನ್ನ ಅಂಜಿಕೆ ಎನಿಸುತ್ತದೆ." "ನಾನು ನಿನ್ನ ಮಗಳ ಅದೃಷ್ಟ. ಅವಳೊಡನೆ ಇರದೆ ಮತ್ತಾರೊಡನೆ ಇರಲಿ ನಾನು? ನಿನಗಂತೂ ವಯಸ್ಸಾದವು. ನಿನ್ನ ಅದೃಷ್ಟ ತೀರಿತು. ಇನ್ನು ನಿನ್ನ ಮಗಳ ಅದೃಷ್ಟದ ಆಟ ನಡೆಯುವದು" ಎಂದಿತು ಆ ಪ್ರಾಣಿಯು. ಮುದುಕಿ ಅಂದಳು, "ನನ್ನ ಮಗಳು ಬಹು ಚಲುವೆ. ಆದರೆ ಯಾರಿಗೆ ಗೊತ್ತು ಏನಿದೆ ಅವಳ ಅದೃಷ್ಟದಲ್ಲಿ? ನಾವಂತೂ ತೀರ ಬಡವರು. ಅರಸನಿಗೆ ಶೋಭಿಸುವಂಥ ಹುಡುಗಿ ಇದ್ದಾಳೆ ನನ್ನ ಮಗಳು. ಆದರೆ ಯಾರಿಗೆ ಗೊತ್ತು. ನನ್ನಂಥ ತಿರುಕಳ ಹೊಟ್ಟೆಯಲ್ಲಿ ಹುಟ್ಟಿದರೂ ಬಹಳ ಕೋಮಲ ವಿದ್ದಾಳೆ ಅವಳು. ಅವಳ ಕಾಲು ಹೂವಿಗಿಂತ ಮೆತ್ತಗಾಗಿವೆ." "ಏ ಮುದುಕಿ ಯಾಕೆ ಸುಮ್ಮನೆ ಜಂಬ ಕೊಚ್ಚುವದು ? ನಿನ್ನ ಮಗಳ ನಶೀಬ

ಸೆಟ್ಟಿಗಿಲ್ಲ. ಅವಳ ಮದುವೆ ಒಂದು ಶವದೊಡನೆ ಆಗತಕ್ಕದ್ದಿದೆ'' ಎಂದು ಅಂದ ಆ ವಿಚಿತ್ರ ಪ್ರಾಣಿ. ಇದನ್ನು ಕೇಳಿ, ಪಾಪ! ಮುದುಕಿ ಎಚ್ಚರ ದಪ್ಪಿ ಬಿದ್ದಳು. ಆ ಪ್ರಾಣಿ ಕಾಣದಂತಾಯಿತು. ಚಿಕ್ಕ ಬಾಲಿಕೆ, ಒಳ್ಳೇ ಧೈರ್ಯದವಳು. ಅಲ್ಲಿಯೇ ಇದ್ದ ಮುತ್ತಲ ಎಲೆಯ ದೊನ್ನೆ ಮಾಡಿ, ನೀರು ತಂದಳು. ತನ್ನ ತಾಯಿಯ ಕಣ್ಣಿಗೆ ಹಚ್ಚಿದಳು. ತಾಯಿ ಎಚ್ಚತ್ತು "ಅಯ್ಯೋ ಹುಡುಗಿ, ಏನದನ ನಿನ್ನ ನಶೀಬದೊಳಗೆ?" ಅಂದಳು. ಹೀಗಂದು ಸಣ್ಣ ಹುಡುಗರಂತೆ ಅಳಲಾರಂಭಿಸಿದಳು. ಆದರೆ ಆ ಹುಡುಗಿ ತಾಯಿಗೆ ಅಂದಳು, "ಅವ್ವಾ, ದೇವರು ಮಾಡಿದ್ದೆಲ್ಲ ನಮ್ಮ ಕಲ್ಯಾಣ ಕ್ಕಾಗಿಯೇ. ಅವನು ವಿಷವನ್ನೇ ಕೊಡಲಿ, ಅಮೃತವನ್ನೇ ಕೊಡಲಿ; ಮಳೆಯನ್ನೇ ದಯಪಾಲಿಸಲಿ, ಬಿಸಲನ್ನೇ ಕೊಡಲಿ, ಏನು ಕೊಟ್ಟರೂ ಅದೆಲ್ಲ ನಮ್ಮ ಕಲ್ಯಾಣಕ್ಕಲ್ಲವೇ? ದೇವರು ದಯಾವಂತನು. ನಾವೇಕೆ ಅವನನ್ನು ಶಂಕಿಸಬೇಕು. ನೋಡು ಈ ಗಿಡಗಳು ನಿನಗೆ ಗಾಳಿಬೀಸುತ್ತವೆ. ದೇವರ ಕೈಗಳೇ ನಿನಗೆ ಗಾಳಿ ಬೀಸಿದಂತೆ ಅಲ್ಲವೇ?"

ತಾಯಿಯ ಕೈಹಿಡಿದು ಹುಡುಗಿ ನಡೆದಳು. ಸಂಜೆಯಾಯಿತು. ಅರಸನ ರಾಜಧಾನಿ ಕಾಣುತ್ತಿತ್ತು. ಕತ್ತಲೆ ಕವಿಯಿತು. ಮುದುಕೆಗೆ ಬಹಳ ನೀರಡಿಕೆಯಾಯಿತು. ಆದರೆ ನೀರು ಹುಡುಕುವದಾದರೂ ಎಲ್ಲಿ, ಸಿಕ್ಕುವದಾದರೂ ಎಲ್ಲಿ, ಆದರೆ ಹೂವಿನ ಕಂಪು ಬರುತ್ತಿತ್ತು. ಆದ್ದರಿಂದ ಸಮೀಪದಲ್ಲಿ ಎಲ್ಲಿಯಾದರೂ ತೋಟವಿರಬೇಕು ಎಂದು ಆ ಹುಡುಗಿಗೆ ಅನಿಸಿತು. "ಅವ್ವಾ, ನೀನು ಇಲ್ಲೆ ಕೂಡು, ಹೂವಿನ ಕಂಪು ಬರುತ್ತಿದೆ. ಸಮೀಪ ತೋಟವಿರಬೇಕು'' ಎಂದು ಹೇಳಿ ಅವಳು ನೀರು ಹುಡುಕಲು ಹೋದಳು.

ಅದೇ ಪ್ರಧಾನ ಕುಮಾರನ ತೋಟವಿತ್ತು. ಬಹಳೇ ವಿಸ್ತಾರವಾದ ತೋಟ. ಒಳಗೆ ಹೋದವರಿಗೆ ಹೊರಗೆ ಬರುವದು ಕಷ್ಟವಾದದ್ದು. ರಾತ್ರಿ ಯಲ್ಲಂತೂ ಯಾರಾದರೂ ಗೊತ್ತಿಲ್ಲದವರು ಒಳಗೆ ಹೋದರೆ ಹೊರಗೆ ಬರುವದು ಸಾಧ್ಯವಿದ್ದಿಲ್ಲ. ಬೆಳಗಾದಮೇಲೆ ಹೊರಬೀಳುವದು ಸಾಧ್ಯ. ಆ ಹುಡುಗಿ ತೋಟದಲ್ಲಿ ಹೋದಳು. ನೀರು ಹುಡುಕುತ್ತ ಹೊರಟಳು.

ಅಲ್ಲಿಯೇ ಇದ್ದ ಕಾರಂಜಿಯ ಹತ್ತರ ಬಂದಳು. ರಾತ್ರಿಯ ವೇಳೆ. ಅಲ್ಲಿಯೇ ಇದ್ದ ಬಾಳೆಯ ಎಲೆಗಳನ್ನು ಹರಿದಳು. ಹರಿಯುವ ಮೊದಲು ನಿದ್ರೆಯಲ್ಲಿದ್ದ ಗಿಡದ ಎಲೆ ಹರಿಯಬೇಕಾಗುತ್ತದೆಂದು ನಮಸ್ಕರಿಸಿ ಆ ಗಿಡದ ಕ್ಷಮೆ ಕೋರಿದಳು. ಆ ಎಲೆಗಳ ದೊನ್ನೆ ಮಾಡಿ ನೀರು ತುಂಬಿಕೊಂಡಳು. ಓಡಾಡಿದಳು. "ನನ್ನ ತಾಯಿ ನೀರಡಿಕೆಯಿಂದ ತಳಮಳಗೊಂಡಿದ್ದಾಳೆ." ಹೀಗನ್ನುತ್ತ ಮತ್ತೆ ಅತ್ತೊಮ್ಮೆ ಇತ್ತೊಮ್ಮೆ ಹೊರಗೆ ಹೋಗುವ ಪ್ರಯತ್ನದಲ್ಲಿ ಓಡ್ಯಾಡಿದಳು. ಆವಳು ಅಳಹತ್ತಿದಳು.

ರಾತ್ರಿ ಬಹಳವಾಗಿತ್ತು. ಪ್ರಧಾನಪುತ್ರ ಅಂದು ಯಾವುದೋ ಊರಿಗೆ ಹೋಗಿದ್ದ. ರಾಜಕುಮಾರ ಒಬ್ಬನೇ ಇದ್ದ. ರಾತ್ರಿ ಜೀವಂತನಾಗಿದ್ದ ಮತ್ತು ತೋಟದಲ್ಲಿ ಅಡ್ಡಾಡುತ್ತಿದ್ದ. ಅಡ್ಡಾಡುವಾಗ ಈ ಹುಡುಗಿಯನ್ನು ಕಂಡ. ಇಬ್ಬರೂ ಒಬ್ಬರನ್ನೊಬ್ಬರು ನೋಡಹತ್ತಿದರು. 'ಅಯ್ಯೋ ನಮ್ಮಪ್ಪ' ಎಂಬ ಶಬ್ದಗಳು ಹುಡುಗಿಯ ಬಾಯಿಂದ ಹೊರಬಿದ್ದವು. ರಾಜಕುಮಾರ ಅವಳಿಂದ ಎಲ್ಲ ಸಂಗತಿ ತಿಳಿದುಕೊಂಡನು. "ನಾನು ನಿನಗೆ ಹಾದಿ ತೋರಿಸುತ್ತೇನೆಂದು ಅವಳನ್ನು ಹೊರಗೆ ಕರಕೊಂಡು ಬಂದ. ಎಷ್ಟೋ ದಿವಸಗಳಿಂದ ರಾಜಕುಮಾರ ಹೊರಗೆ ಬಂದಿದ್ದಿಲ್ಲ. ಇಬ್ಬರೂ ಅವಳ ತಾಯಿಯನ್ನು ಹುಡುಕಿ, ಅವಳ ಬಳಿಯಲ್ಲಿ ಬಂದರು. "ಇಗೋ ನೋಡು ನೀರು ಅವ್ವಾ" ಅಂದಳು ಆ ಹುಡುಗಿ. ಅವ್ವ ಕಣ್ಣು ತೆರೆದಳು. ಮಗಳ ತೊಡೆಯ ಮೇಲೆ ತನ್ನ ತಲೆ ಇಟ್ಟು ಅಂದಳು, "ತಂಗಿ, ನಾನಂತೂ ಇನ್ನು ಬದುಕುವದಿಲ್ಲ. ಇದೇ ಕೊನೆಯ ನೀರಿನ ಗುಟುಕು. ಈ ನಿನ್ನ ಗಂಗೆಯನ್ನು ಬಾಯಿಯಲ್ಲಿ ಹಾಕು." "ಅಮ್ಮಾ, ನೀವು ನಿಮ್ಮ ಮಗಳ ಚಿಂತೆಯನ್ನು ಮಾಡಬೇಡಿರಿ. ನಾನು ರಾಜಕುಮಾರ. ಅವಳೊಡನೆ ಮದುವೆ ಮಾಡಿಕೊಳ್ಳುವೆ. ನಮ್ಮಿಬ್ಬರ ಕೈಗಳನ್ನು ನೀವು ಕೂಡಿಸಿ ನಮಗೆ ಆಶೀರ್ವಾದ ಮಾಡಿರಿ" ಎಂದು ರಾಜಕುಮಾರ ಮುದುಕಿಗೆ ಅಂದನು. ಮುದುಕಿ ಆ ಪ್ರಕಾರ ತನ್ನ ಮಗಳ ಕೈ ರಾಜಕುಮಾರನ ಕೈಯಲ್ಲಿ ಕೊಟ್ಟಳು. ಗಿಡಗಳಿಂದ ಅವರ ತಲೆಗಳ ಮೇಲೆ ಹೂವು ಉದುರಿದವು. ಮುದುಕಿ ತನ್ನ ಕ್ಷೀಣವಾದ ಹಸ್ತವನ್ನು ಪ್ರೇಮ

ಭರದಿಂದ ಅವರೀರ್ವರ ತಲೆಯಮೇಲಿಟ್ಟು ಅಂದಳು, "ದೇವರು ನಿಮಗೆ ದೀರ್ಘಾಯುಷ್ಯವನ್ನೀಯಲಿ! ಮಕ್ಕಳನ್ನು ದಯಪಾಲಿಸಲಿ!! ನಿಮ್ಮನ್ನು ಸುಖದಲ್ಲಿಡಲಿ!!! ಒಬ್ಬರಿಂದೊಬ್ಬರು ಅಗಲಬೇಡಿರಿ! ಬೇಕಾದೆಂಥ ಭಾಗ್ಯ ಬಂದರೂ ದೇವರನ್ನು ಮರೆಯಬೇಡಿರಿ. ಉಕ್ಕಬೇಡಿರಿ. ಸೊಕ್ಕಬೇಡಿರಿ. ಯಾರ ಕೆಡಕನ್ನೂ ಬಯಸಬೇಡಿರಿ. ಕೆಡಕನ್ನು ಮಾಡಬೇಡಿರಿ. ಯಾರನ್ನು ದ್ವೇಷಿಸಬೇಡಿರಿ. ಸಾಕು ಇನ್ನು ಹೆಚ್ಚು ಹೇಳುವದು ಸಾಧ್ಯವಿಲ್ಲ ನನಗೆ. ಬಾಯಿ ಆರಿತು. ದೇವರ ಹೆಸರು ತಕ್ಕೊಂಡು ಪ್ರಾಣ ಬಿಡುತ್ತೇನೆ" ಹೀಗಂದು 'ರಾಮ, ರಾಮ' ಅಂದು ಅವಳು ಪ್ರಾಣ ಬಿಟ್ಟಳು. ತೋಟದಲ್ಲಿ ಶವವನ್ನು ಒಯ್ದು ಅದಕ್ಕೆ ಅವರಿಬ್ಬರು ಅಗ್ನಿ ಸಂಸ್ಕಾರ ಮಾಡಿದರು.. ಇಬ್ಬರು ದಣಿದಿದ್ದರು. ಆ ಹುಡುಗಿಯ ಸಮಾಧಾನ ಮಾಡುತ್ತಿದ್ದನು ರಾಜಕುಮಾರನು. ಅವಳು ಅಳುತ್ತಿದ್ದಳು. ಕೈಕಾಲು ತೊಳಕೊಂಡು ಇಬ್ಬರು ಮನೆ ಸೇರಿದರು. ರಾಜಕುಮಾರನ ಆಗ್ರಹದ ಮೂಲಕ ಅವಳು ಒಂದೆರಡು ಹಣ್ಣುಗಳನ್ನು ತಿಂದಳು. ರಾಜಕುಮಾರ ತನ್ನ ಸಂಗತಿಯನ್ನೆಲ್ಲ ಅವಳಿಗೆ ತಿಳಿಸಿದ. "ನಾನು ಮುಂಜಾನೆ ಸತ್ತುಬೀಳುವೆ. ಆದರೆ ರಾತ್ರಿ ಎಚ್ಚರಾಗುವೆ. ನೀನು ಚಿಂತೆ ಮಾಡಬೇಡ. ಕೊನೆಗೆ ಎಲ್ಲವೂ ಸರಿಯಾಗುವದು" ಎಂದು ಹೇಳಿದ.

ತನ್ನ ಅದೃಷ್ಟದಲ್ಲಿದ್ದದ್ದು ಅವಳಿಗೆ ನೆನಪಾಯಿತು. "ಶವದೊಡನೆ ಇವಳ ವಿವಾಹವಾಗುವದು" ಈ ಶಬ್ದ ಅವಳಿಗೆ ನೆನಪಾದವು. ಇರಲಿ, ಬಂದದ್ದನ್ನು ಧೈರ್ಯದಿಂದ ಎದುರಿಸುವ. ತಾಯಿ ಲಗ್ನ ಮಾಡಿಕೊಟ್ಟಿದ್ದಾಳೆ. ಈ ಪಾದಗಳಿಂದ ಅಗಲುವಂತಿಲ್ಲ. ಹೀಗೆ ಅವಳು ವಿಚಾರ ಮಾಡಿದಳು.

ಮರುದಿವಸ ಮುಂಜಾನೆ ನಿತ್ಯದಂತೆ ರಾಜಕುಮಾರ ಸತ್ತು ಬಿದ್ದ ಅವನ ಮೈಮೇಲೆ ಒಂದು ನೊಣ ಸಹ ಕೂಡದಂತೆ ಅವಳು ನೋಡಿಕೊಂಡಳು. ಇಡೀ ದಿವಸ ಏನೂ ತಿನ್ನಲಿಲ್ಲ. ರಾಮನಾಮ ಜಪಿಸುತ್ತ ಗಂಡನ ಹತ್ತಿರವೇ ಕುಳಿತಳು. ರಾತ್ರಿಯಾಯಿತು. ನಿತ್ಯದಂತೆ ಮಲಗುವ ವೇಳೆಯಾಯಿತು. ಸರಪಳಿ ತೆಗೆದು ತಲೆಗಿಂಬಿನ ಕೆಳಗೆ

ಇಟ್ಟಳು. ಕೂಡಲೇ ರಾಜಕುಮಾರ ಎದ್ದನು. ಅವನು ಎದ್ದೊಡನೆ ಅವಳಿಗೆ ಆನಂಗವಾಯಿತು. ಇಬ್ಬರೂ ತೋಟದಲ್ಲಿ ಹೋಗಿ ಸ್ನಾನ ಮಾಡಿದರು. ಅಲ್ಲಿ ಒಂದು ಶಿವಾಲಯವಿತ್ತು. "ನಡೆ, ಗುಡಿಗೆ ಹೋಗುವ. ಇನ್ನು ಮುಂದೆ ದಿನಾಲು ಈ ಮೃತ್ಯುಂಜಯನನ್ನು ಪೂಜಿಸುವ" ಎಂದಳು ಅವಳು. ಇಬ್ಬರೂ ಮಹಾದೇವನ ಪೂಜೆ ಮಾಡಿ ಮನೆಗೆ ಹೋಗಿ ಫಲ ಹಾರ ಮಾಡಿದರು. "ನೀನು ಹಗಲು ತಿನ್ನು ಉಪವಾಸ ಮಾಡಬೇಡ" ಎಂದು ರಾಜಕುಮಾರ ಅಂದ. ಸ್ತ್ರೀ ಹೃದಯ ನಿಮಗೆ ಹೇಗೆ ತಿಳಿ ಯುವದು? ನೀವಿಲ್ಲದೆ ನಾನು ತಿನ್ನುವದಾದರೂ ಹೇಗೆ? ಸೀತಾ, ದಮ ಯಂತಿ, ಸಾವಿತ್ರಿ, ದ್ರೌಪದಿ ಇವರ ಕತೆ ನಾನು ಕೇಳಿದ್ದು ವ್ಯರ್ಥವೇ? ನೀವಿಲ್ಲದ ಊಟ ವಿಷ. ರಾಮನಾಮವೇ ಹಗಲು ಊಟ" ಎಂದು ಅವಳು ಅಂದಳು.

ತನ್ನ ಹೆಂಡತಿಯ ಉಚ್ಚ ವಿಚಾರವನ್ನು ಕೇಳಿ ರಾಜಕುಮಾರ ಸಂತೋಷಪಟ್ಟ. ಇಂಥ ಮಡದಿಯನ್ನು ತನಗೆ ಕೊಟ್ಟದ್ದಕ್ಕಾಗಿ ದೇವರ ಆಭಾರ ಮನ್ನಿಸಿದ.

ಪ್ರಧಾನಪುತ್ರ ಊರಿಂದ ಬಂದಿದ್ದ. ಗೆಳೆಯನಿಗೆ ಭೆಟ್ಟಿಯಾಗಲಿಕ್ಕೆ ಬಂದನು. ತೋಟದಲ್ಲಿ ರಾಜಕುಮಾರನೊಡನೆ ಒಬ್ಬ ಸ್ತ್ರೀ ಇದ್ದದ್ದು ನೋಡಿ ಆಶ್ಚರ್ಯವಾಯಿತು. ರಾಜಕುಮಾರನು ತನ್ನ ಗೆಳೆಯನಿಗೆ ಆದ ಸಂಗತಿಯನ್ನೆಲ್ಲ ಹೇಳಿದ. ಅವನಿಗೆ ಆನಂದವಾಯಿತು. ಇನ್ನು ನಾನು ಊರಿಗೆ ಹೋದರೂ ಅಡ್ಡಿಯಿಲ್ಲ. ನೀನು ಒಬ್ಬಂಟಿಗನೇ ಆಗುವದಿಲ್ಲ. ಆದರೆ ನಿನ್ನ ಹೆಂಡತಿಗೆ ದಿನಾಲು ಮಧ್ಯಾನ್ಹ ಊಟಕ್ಕೆ ಬರಲಿಕ್ಕೆ ಹೇಳು. ಆಗ ಅವಳು ಅಂದಳು, "ಮೈದುನರೆ, ನಾನು ಹಗಲು ಊಟ ಮಾಡು ವಂತಿಲ್ಲ. ನೀವು ಅಡಿಗೆಯ ಎಲ್ಲ ಸಾಮಾನುಗಳನ್ನು ನನಗೆ ಇಲ್ಲಿ ತಂದು ಕೊಡಿರಿ. ನಾನು ದಿನಾಲು ಅಡಿಗೆ ಮಾಡಿ ಇವರಿಗೆ ಊಟಕ್ಕೆ ಹಾಕುವೆ. ನಿಜವಾದ ಆನಂದ ಸೇವೆಯಲ್ಲಿದೆ."

ಪ್ರಧಾನಪುತ್ರ ಎಲ್ಲ ವ್ಯವಸ್ಥೆ ಮಾಡಿಕೊಟ್ಟನು. ದಿನಾಲು ರಾತ್ರಿ ಅವಳು ಅಡಿಗೆ ಮಾಡಿ ಪತಿದೇವನು ಜೀವಂತನಾಗುವ ಹಾದಿ ನೋಡುತ್ತಿ

ದ್ದಳು. ಅವನು ಎದ್ದೊಡನೆ ಇಬ್ಬರೂ ಕೂಡಿ ಸ್ನಾನ ಮಾಡಿ ದೇವರ ಪೂಜೆ ಮಾಡುತ್ತಿದ್ದರು. ಊಟವಾದ ಮೇಲೆ ಅವಳು ಮುಸರಿ ಭಾಂಡಿ ತಿಕ್ಕುತ್ತಿದ್ದಳು. ರಾಜಕುಮಾರ ಅವನ್ನು ನೀರಿನಿಂದ ತೊಳೆಯುತ್ತಿದ್ದ. ಇವಳು ಬೇಡ ಎಂದರೂ ಕೇಳುತ್ತಿದ್ದಿಲ್ಲ. ಒಬ್ಬರಿಗೊಬ್ಬರು ಸಹಾಯ ಮಾಡಬೇಕೆಂದು ಅವನು ಹೇಳುತ್ತಿದ್ದ.

ಈ ರೀತಿ ಒಂವರ ಹಿಂದೊಂದು ದಿನಗಳು ಹೋದವು. ರಾಜಕುಮಾರನಿಗೆ ಒಬ್ಬ ಮಗ ಹುಟ್ಟಿದ. ಮಗುವನ್ನು ಆಡಿಸುವದರಲ್ಲಿ ಹಗಲು ಅವನ ಹೆಂಡತಿ ಹೊತ್ತು ಕಳೆಯುತ್ತಿದ್ದಳು. ಒಂದು ಸುಂದರವಾದ ತೊಟ್ಟಿಲವನ್ನು ತೂಗ ಹಾಕಿದ್ದರು. ಆದರೆ ಇದೇ ರೀತಿ ಕಾಲವಾದರೂ ಕಳೆಯುವದೆಂತು? ರಾಜನಿಗೆ ಈ ಸಂಗತಿ ಗೊತ್ತಿದ್ದಿಲ್ಲ. ಪ್ರಧಾನ ಕುಮಾರನಹೊರ್ತು ಬೇರೆ ಯಾರಿಗೂ ಈ ರಹಸ್ಯದ ಸುದ್ದಿ ಇದ್ದಿಲ್ಲ. ಈ ಗುಟ್ಟನ್ನು ಬಿಡಿಸುವ ಬಗೆಯಾದರೂ ಯಾವದು ?

ಪ್ರಧಾನ ಕುಮಾರ ಸುಮ್ಮನೆ ಕೂತಿದ್ದಿಲ್ಲ. ಮಲತಾಯಿಯ ಚಲನವಲನಗಳ ಮೇಲೆ ಲಕ್ಷ್ಯವಿಡಲು ಅನೇಕ ದಾಸಿಯರಿಗೆ ಹೇಳಿದ್ದನು. ಒಂದು ದಿವಸ ಮಲತಾಯಿಗೆ ತಲೆನೋವು ಆಗಿತ್ತು. ದಾಸಿಯೊಬ್ಬಳು ತಲೆ ತಿಕ್ಕುತ್ತಿದ್ದಳು. ಏನಾದರೂ ರಾಣಿಗೆ ನಿದ್ದೆ ಬರಲೊಲ್ಲದು. ಏನೋ ಅಕಸ್ಮಾತ್ತಾಗಿ ನೆನಪಾಯಿತು. "ಅಯ್ಯೋ ಇಂದು ನಾನು ಈ ಸರಪಳಿ ತೆಗೆದಿಟ್ಟಿಲ್ಲವಲ್ಲ" ಅಂದು ಸರಪಳಿ ಕೊರಳೊಳಗಿಂದ ತೆಗೆದು, ತಲೆಗಿಂಬಿನ ಕೆಳಗೆ ಇಟ್ಟಳು. ದಾಸಿ ಅಂದಳು, "ಚಿನ್ನದ ಸರಪಳಿ ತಗೆದೇಕೆ ಇಟ್ಟಿರಿ?" ರಾಣಿ ಅಂದಳು. "ಅದು ಕೊರಳಿಗೆ ನಡುತ್ತದೆ. ತೆಗೆದು ಇಡದೆ ನಿದ್ದೆ ಬರುವದಿಲ್ಲ. ನಾನು ಮಲಗುವ ಮೊದಲು ದಿನಾಲು ತೆಗೆದು ತಲೆಗಿಂಬಿನ ಕೆಳಗೆ ಇಡುತ್ತೇನೆ. ಒಂದು ಕ್ಷಣ ಸಹ ನಾನು ಈ ಸರಪಳಿ ಬಿಟ್ಟು ಆಗಲುವಂತಿಲ್ಲ."

ದಾಸಿಗೆ ಈ ಮಾತು ಬಹಳ ಮಹತ್ವದ್ದೆನಿಸಿತು. ಅವಳು ಪ್ರಧಾನ ಕುಮಾರನಿಗೆ ತಿಳಿಸಿದಳು. ಪ್ರಧಾನಪುತ್ರನಿಗೆ ಎಲ್ಲ ಮಾತುಗಳು ಹೊಳೆದವು. ರಾಜಪುತ್ರ ತನಗೆ ಹೇಳಿದ ಸರಪಳಿಯ ಸಂಗತಿ ಇದೇ ಇರಲಿಕ್ಕೆ

ಬೇಕು ಆದರೆ ಅದನ್ನು ದೊರಕಿಸುವ ಬಗೆ ಹೇಗೆ ಎಂದು ವಿಚಾರ ಮಾಡುತ್ತಿದ್ದನು.

ಪ್ರಧಾನಪುತ್ರನು ರಾಜಕುಮಾರ ಮತ್ತು ಅವನ ಹೆಂಡತಿಗೆ ಈ ಮಾತು ತಿಳಿಸಿದನು. ರಾಜಪುತ್ರನ ಹೆಂಡತಿ ಸಾಹಸ ಮಾಡಲು ಒಪ್ಪಿದಳು. ತನ್ನ ಪತಿಯ ಪ್ರಾಣ ತಿರುಗಿ ತರುವ ನಿಶ್ಚಯ ಮಾಡಿದಳು. ಬೆಳಗಾಯಿತು. ಅವಳು ತನ್ನ ಹಳೆಯ ಹರಕು ಸೀರೆಯನ್ನು ಉಟ್ಟಳು. ತಿರುಕಳ ವೇಷ ದಲ್ಲಿಯೇ ತನ್ನಮಗನನ್ನು ಕರೆದುಕೊಂಡು ಹೊರಟಳು. ಅವಳು ಅರಸಿ ಯರು ತಲೆದೂಗುವಷ್ಟು ಚಲುವೆ ಇದ್ದಳು. ಹೀಗೆ ತಿರುಗುತ್ತ ಅವಳು ಅರಮನೆಯ ಹತ್ತರ ಬಂದಳು. ಮಲತಾಯಿ ಅರಸಿ ಅಂಗಳದಲ್ಲಿದ್ದಳು. ಆ ಭಿಕ್ಷೆ ಬೇಡುವವಳು ರಾಣಿಗೆ ಅಂದಳು, "ಅಮ್ಮಾ, ನಾನು ಬಡವಿ; ನನಗಾರೂ ಇಲ್ಲ. ನೀವು ಹೇಳಿದ ಕೆಲಸ ನಾನು ಮಾಡುವೆ. ನಿಮ್ಮ ಹೆರಳು ಹಾಕುವೆ" ಅರಸಿಗೆ ಆಶ್ಚರ್ಯವೆನಿಸಿತು. ಅವಳ ರೂಪ ನೋಡಿ ಅವಳಿಗೆ ಮತ್ಸರವೆನಿಸಿತು. ಇಂಥ ಸುಂದರ ಸ್ತ್ರೀ ತನ್ನ ದಾಸಿಯಾಗಬೇಕು. ಎಂದು ಅವಳು ಹವಣಿಸಿದಳು.

"ಆ ನೀರಿನಿಂದ ಸ್ವಚ್ಛ ಕೈ ಕಾಲು ತೊಳೆದುಕೊಂಡು ಬಂದು ನನ್ನ ಹೆರಳು ಹಾಕು" ಅಂದಳು ರಾಣಿ. ವೇಷಧಾರಿ ಭಿಕ್ಷುಕಿ ಹಾಗೆ ಮಾಡಿ ದಳು. ಒಳ್ಳೆ ಸಾವಕಾಶವಾಗಿ ಕೂದಲುಗಳನ್ನು ಹಿಕ್ಕಿದಳು. ಒಂದು ಸ್ವಲ್ಪ ಸಹ ನೋವಾಗಲಿಲ್ಲ ರಾಣಿಗೆ. ಅಷ್ಟರಲ್ಲಿ ಅವಳ ಮಗ ಅಳಲಾರಂಭಿ ಸಿದ. ಯಾರು ಅಳುತ್ತಾರೆಂದು ನೋಡಲು ಹಿರಿಯ ರಾಣಿ ಬಂದಳು. ಅವಳನ್ನು ನೋಡಿದ ಕೂಡಲೇ ಈ ರಾಣಿ ಅಂದಳು, "ನಿಮ್ಮ ಮಗ ಬಂದಿಲ್ಲ! ಈ ಜನ್ಮದಲ್ಲಂತೂ ಇದು ಸಾಧ್ಯವೇ ಇಲ್ಲ. ಮಗ ತಿರುಗಿ ಬರುವನು ಎಂಬ ಎಂಥ ಹುಚ್ಚು ಆಶೆ ನಿಮಗೆ."

ಭಿಕ್ಷುಕಿಗೆ ನನ್ನ ಗಂಡನ ತಾಯಿ ಯಾರು ಎಂಬುದು ತಿಳಿಯಿತು. ತನ್ನ ಅತ್ತೆ ಎಂದು ಮನಗಂಡಳು. ಅವಳಿಗೆ ನಮಸ್ಕಾರ ಮಾಡಬೇಕೆಂದು ಅನಿಸಿತು. ಆದರೆ ಅವಳು ಸುಮ್ಮನಿದ್ದಳು. ಇದು ತಕ್ಕ ಸಮಯವಲ್ಲೆಂದು ಅರಿತಳು. ಆ ರಾಣಿ ಸಣ್ಣ ಹುಡುಗನ ಹತ್ತಿರ ಬಂದು ಅಂದಳು,

"ನನ್ನ ಮಗು ಹೀಗೇ ಕಾಣಿಸುತ್ತಿದ್ದ. ಎಷ್ಟು ಸೊಗಸಾದ ಮಗು ಇದು! ಆದರೆ ದೇವರಿಗೆ ನನ್ನ ಭಾಗ್ಯ ಸಹನವಾಗಲಿಲ್ಲ. ನನ್ನ ಬದಲು ಅವನನ್ನೇ ಕರೆದುಕೊಂಡು ಹೋದ. ಚಿನ್ನದಂಥ ಮಕ್ಕಳನ್ನು ಒಯ್ದು ನಮ್ಮಂಥ ಮುದುಕರನ್ನು ದುಃಖಕ್ಕೆ ಗುರಿಮಾಡುತ್ತಾನೆ! ಈ ಮಗುವನ್ನು ನಾನು ಕರೆದುಕೊಳ್ಳಲಿಯಾ?"

"ಹಾ, ನಿಲ್ಲು. ಇವಳು ನನ್ನ ದಾಸಿ. ಇದು ಅವಳ ಮಗು. ಏ! ದಾಸಿ, ನೀನು ಇವಳೊಡನೆ ಮಾತನಾಡತಕ್ಕದ್ದಲ್ಲ. ಮಾತನಾಡಿದರೆ ನಿನ್ನನ್ನು ಕೆಲಸದಿಂದ ಕಿತ್ತು ಹಾಕುವೆ" ಎಂದು ಗರ್ಜಿಸಿದಳು ಈ ರಾಣಿ. ಹಿರಿ ರಾಣಿ ತಿರುಗಿ ಹೋದಳು. ರಾಜಕುಮಾರನ ಹೆಂಡತಿಯಾದ ಭಿಕ್ಷುಕಿ ನಾಳೆ ಬರುತ್ತೇನೆಂದು ಹೇಳಿ ಹೋದಳು.

ರಾತ್ರಿ ರಾಜಕುಮಾರನಿಗೆ ಅವಳು ಎಲ್ಲ ಸಂಗತಿ ತಿಳಿಸಿದಳು. ಮತ್ತು "ನಿಮ್ಮನ್ನು ನಾನು ಶೀಘ್ರವಾಗಿಯೇ ಮುಕ್ತ ಮಾಡುವೆ" ಅಂದಳು. ರಾಜಕುಮಾರನ ಮಗ ಈಗ ೪—೫ ವರ್ಷದವನಾಗಿದ್ದನು. ಅವನಿಗೆ ಸಾಧಾರಣವಾಗಿ ಹೇಳಿದ್ದೆಲ್ಲ ತಿಳಿಯುತ್ತಿತ್ತು. "ಕಂದಾ, ನಾನು ನೀನು ಇಂದು ರಾಣಿಯ ಕಡೆ ಹೋಗುವ. ಅಲ್ಲಿ ನೀನು ದೊಡ್ಡ ದನಿಯಿಂದ ಅಳು. ನಾನು ನಿನಗೆ ಎಷ್ಟು ತಿಳಿಸಿ ಹೇಳಿದರೂ ನನ್ನ ಮಾತು ಕೇಳಬೇಡ. ಅವಳು ನಿನಗೆ ಕೇಳುವಳು "ಯಾಕೆ ಅಳುತ್ತಿ?" ಎಂದು. ಆಗ ನೀನು ಅವಳ ಕೊರಳೊಳಗಿದ್ದ ಸರಪಳಿಕಡೆ ಬಟ್ಟು ಮಾಡು. ಅದನ್ನು ಕೊಟ್ಟರೆ ಮಾತ್ರ ಸಮ್ಮನಾಗು" ಎಂದು ಅವಳು ತನ್ನ ಮಗನಿಗೆ ಹೇಳಿದಳು.

ಈ ರೀತಿ ಮಗನಿಗೆ ಕಲಿಸಿ ಅವಳು ತನ್ನ ಕೆಲಸ ಮಾಡತೊಡಗಿದಳು. ಎರಡನೆ ರಾಣಿಯ ಹೆರಳು ಹಾಕುತ್ತಿದ್ದಳು. ಅಲ್ಲಿಯೇ ಆ ಹುಡುಗ ಆಡುತ್ತಿದ್ದ. ಆಡುತ್ತ ಆಡುತ್ತ ಒಮ್ಮೆಲೇ ಅಳಹತ್ತಿದ. "ಮೊದಲು ಆ ಹುಡುಗ ನನ್ನು ಸಂತೈಸು. ಆ ಮೇಲೆ ಹೆರಳು ಹಾಕು" ಎಂದು ದಾಸಿಗೆ ರಾಣಿ ಹೇಳಿದಳು. "ಹೀಗೇಕೆ ಅಳುತ್ತಿರುವೆ" ಹೀಗಂದಾಗ ಆ ಹುಡುಗ ರಾಣಿಯ ಕೊರಳಲ್ಲಿದ್ದ ಸರಪಳಿ ತೋರಿಸಿ ಅಳಹತ್ತಿದ. "ಓಹೋ, ಕಳ್ಳಾ ನಿನಗೆ

ಈ ಸರಪಳಿ ಬೇಕೆ ?'' ಅಂದಳು. ರಾಣಿ, ಹಾಗಿದ್ದರೆ ನನ್ನ ಹೊಟ್ಟೆಯಲ್ಲಾದರೂ ಹುಟ್ಟಬೇಕಾಗಿತ್ತು. ದೇವರು ಬಿಕ್ಕೆ ಬೇಡುವವರಿಗೆ ಬಹಳ ಮಕ್ಕಳನ್ನು ಕೊಡುತ್ತಾನೆ. ನಮ್ಮಂಥವರಿಗೆ ಮಕ್ಕಳೇ ಇಲ್ಲ.'' ಭಿಕ್ಷುಕಿ ತನ್ನ ಮಗನಿಗೆ ಅಂದಳು, "ಸುಮ್ಮನಿರು ಕಂದಾ. ಮುಂದಿನ ಜನ್ಮದಲ್ಲಿ ರಾಣಿಯ ಹೊಟ್ಟೆಯಲ್ಲಿ ಹುಟ್ಟಿ ಮತ್ತು ಮೈತುಂಬ ಆಭರಣಗಳನ್ನು ಹಾಕಿಕೊ, ಸುಮ್ಮನಾಗು."

ಏನಾದರೂ ಹುಡುಗ ಅಳುವದು ನಿಲ್ಲಿಸಲಿಲ್ಲ. ಕೊನೆಗೆ ರಾಣಿಗೆ ಕನಿಕರವೆನಿಸಿತು. ತಗೋ ಹಾಕಿಕೊ ಈ ಸರಪಳಿ ಸ್ವಲ್ಪ ಹೊತ್ತು. ಈಗ ಮಲಗುವನು. ಅತ್ತು ಅತ್ತು ದಣಿದಿದ್ದಾನೆ. ಅವನು ಮಲಗಿದಾಗ ಸಾವಕಾಶವಾಗಿ ಅದನ್ನು ತಕ್ಕೊಂಡರಾಯಿತು.'' ಅಂದಳು ರಾಣಿಯು. ಚಿನ್ನದ ಸರಪಳಿ ದೊರಕಿದಕೂಡಲೇ ಹುಡುಗ ಸುಮ್ಮನಾದ. ಅವನು ತನ್ನ ತಾಯಿಯ ತೊಡೆಯ ಮೇಲೆ ಮಲಗಿದ. "ನಾನು ಹಿಗೇ ಇವನನ್ನು ಮನೆಗೆ ಕರೆದುಕೊಂಡು ಹೋಗುತ್ತೇನೆ. ಅಲ್ಲಿಯೇ ಮಲಗಿಸಿ ಸದ್ದಿಲ್ಲದೆ ಸರಪಳಿ ತಕ್ಕೊಂಡು ನಿಮಗೆ ತಂದು ಕೊಡುತ್ತೇನೆ" ಎಂದು ದಾಸಿ ಅಂದಳು. "ಹೋಗು, ಆದರೆ ತೀವ್ರ ತಿರುಗಿ ಬಾ. ಆ ಸರಪಳಿ ನನ್ನ ಪ್ರಾಣ ಇದ್ದಂತೆ ಅದೆ" ಅಂದಳು ರಾಣಿಯು. "ಆದರಿಂದ ನಾನೆಂದು ಅಗಲುವದಿಲ್ಲ. ರಾತ್ರಿ ಮಾತ್ರ ನನ್ನ ತಲೆಗಿಂಬಿನ ಕೆಳಗೆ ಇಡುತ್ತೇನೆ.''

ಆ ವೇಷಧಾರಿ ದಾಸಿ ತನ್ನ ಮಗನನ್ನು ಕರೆದುಕೊಂಡು ಮನೆಗೆ ಬಂದಳು. ಅಲ್ಲಿ ಬಂದು ನೋಡಲು ತನ್ನ ಗಂಡ ಜೀವಂತನಾಗಿದ್ದು ಕಂಡು ಬಂದಿತು. ಇಬ್ಬರಿಗೂ ಆನಂದವಾಯಿತು. ಮಗುವಿನ ಕೊರಳಲ್ಲಿದ್ದ ಸರಪಳಿಯ ಕಡೆಗೆ ಬಟ್ಟು ಮಾಡಿ ಅಂದಳು, "ಇದೇ ನಿಮ್ಮ ಪ್ರಾಣ. ಅದನ್ನು ನಾನು ತಿರುಗಿ ತಂದಿದ್ದೇನೆ. ರಾಜಕುಮಾರ ಅಂದ, ''ಇದೇ ನನ್ನ ತಾಯಿ ಹೇಳಿದ ಸರಪಳಿ.''

ಅಷ್ಟರಲ್ಲಿ ಪ್ರಧಾನಪುತ್ರ ಬಂದನು. ತನ್ನ ಹಂಚಿಕೆ ಸಫಲವಾದದ್ದನ್ನು ನೋಡಿ ಅವನಿಗೆ ಆನಂದವಾಯಿತು. "ನಾನು ಅರಸನಿಗೆ ಈ

ಸ್ಥಂಗತಿಯನ್ನೆಲ್ಲ ತಿಳಿಸುತ್ತೇನೆ. ನಿಮ್ಮನ್ನು ಆನೆಯಮೇಲಿಂದ ಮೆರೆಸುತ್ತ ಒಯ್ಯುವೆವು'' ಅಂದ ಪ್ರಧಾನ ಪುತ್ರನು.

ಅವನು ಅರಸನಲ್ಲಿ ಹೋಗಿ ಅವನಿಗೆ ಆದ ಸಂಗತಿಯನ್ನೆಲ್ಲ ತಿಳಿಸಿದ. ಅರಸನಿಗೆ ಆಶ್ಚರ್ಯವೆನಿಸಿತು. ಮಗನನ್ನು, ಮೊಮ್ಮಗನನ್ನು, ಸೊಸೆಯನ್ನು ಕಾಣಲು ಅರಸ-ಅರಸಿ ಆತುರರಾದರು. "ಆ ಚಿಕ್ಕಮಗು ವನ್ನು ನೋಡಿದಕೂಡಲೇ ನನಗೆ ನನ್ನ ಮಗನ ನೆನಪಾಯಿತು. ಹೀಗೆ ಸುಮ್ಮನೆ ನೆನಪು ಆಗುವದಿಲ್ಲ. ಅವನು ನನ್ನ ಮೊಮ್ಮಗನೇ ಎಂದು ನನ್ನ ಒಳಧ್ವನಿ ನನಗೆ ಹೇಳುತ್ತಿತ್ತು. ಹೃದಯದ ಧ್ವನಿ ಎಂದಿಗೂ ಸುಳ್ಳಾಗುವ ದಿಲ್ಲ. ನಡೆಯಿರಿ ಅವರನ್ನೆಲ್ಲ 'ಒಮ್ಮೆ ಕಣ್ಣು ತುಂಬ ನೋಡುವ'' ಎಂದು ಅರಸಿ ಅಂದಳು.

ಸುದ್ದಿ ಊರಲ್ಲೆಲ್ಲ ಹಬ್ಬಿತು. ಲಕ್ಷಾವಧಿ ಜನ ಹೊರಟಿತು. ಆನೆ, ಕುದುರೆ, ರಥ, ಸೈನಿಕರು ಎಲ್ಲರೂ ರಾಜಕುಮಾರ, ಯುವರಾಜ್ಞಿ ಮತ್ತು ಅರಸನ ಮೊಮ್ಮಗನನ್ನು ಸ್ವಾಗತಿಸಲು ಹೊರಟರು. ಅರಸ-ಅರಸಿ ತೋಟದಲ್ಲಿ ಬಂದರು. ಸೊಸೆ ನಮಸ್ಕಾರ ಮಾಡಿದಳು. ರಾಜಕುಮಾರ ತಾಯಿಗೆ ಭೆಟ್ಟಿ ಆದನು. ಮೊಮ್ಮಗನನ್ನು ಅರಸ ಎತ್ತಿಕೊಂಡನು. ಎಲ್ಲ ರಿಗೂ ಗಗನದಲ್ಲಿ ಕೂಡ ಸಾಲದಷ್ಟು ಆನಂದವಾಯಿತು. ಬಡವರಿಗೆ ಅನ್ನದಾನ ವಸ್ತ್ರದಾನ ಮಾಡಲಾಯಿತು. ಎಲ್ಲರೂ ಸುಖಿಯಾದರು. ಆದರೆ ಆ ಆನಂದದ ಜಗತ್ತಿನಲ್ಲಿ ಒಂದು ಪ್ರಾಣಿ ಮಾತ್ರ ದುಃಖಸಾಗರದಲ್ಲಿ ಮುಳುಗಿತ್ತು. ಅವಳೆಂದರೆ ರಾಜಕುಮಾರನ ಮಲತಾಯಿ.

ಅರಸ ಅವಳ ಮೂಗು ಕೊಯ್ಯಲು ಆಜ್ಞೆ ಹೊರಡಿಸಿದ. ಅವ ಳನ್ನು ಮೂಗು ಕೊಯ್ದು ಗಡಿಪಾರು ಮಾಡಿ ಬರಲು ಹೇಳಿದ್ದ. ಆದರೆ ರಾಜಕುಮಾರನು ಉದಾರ ಮನಸ್ಸಿನವನಿದ್ದನು. ಅವನು ಹಾಗೆ ಮಾಡಲು ಅಡ್ಡಿ ಮಾಡಿದನು. ''ದಯೆಯೇ ನಿಜವಾದ ಧರ್ಮದ ತಳಹದಿ.'' ರಾಜಕುಮಾರ ಅಂದನು.

ರಾಜಕುಮಾರ ಮಲತಾಯಿ ಪಾದಕ್ಕೆ ಬಿದ್ದು ಅಂದನು. "ತಾಯಿ, ಇಷ್ಟು ದಿನ ನನ್ನ ಪ್ರಾಣ ನಿನ್ನ ಕೊರಳಲ್ಲಿತ್ತು. ನಿನ್ನ ಕೊರಳಲ್ಲಿಯ

ತಾಯಿತ ನಾನು. ನನ್ನ ತಾಯಿಯಂತೆ ನೀನೂ ನನ್ನ ತಾಯಿ. ನನ್ನನ್ನು ಪ್ರೀತಿಸು. ಮಲತಾಯಿ ಕರಳು ಕರಗಿತು. ''ಇನ್ನು ಮುಂದೆ ನಾನು ನಿನ್ನ ನಿಜವಾದ ತಾಯಿ ಆಗುವೆ" ಅಂದಳು.

ಕೊನೆಗೊಮ್ಮೆ ಎಲ್ಲರಿಗೂ ಆನಂವವಾಯಿತು. ಅದರಂತೆ ನಮಗೂ ಆನಂದವಾಗಲಿ!



# ನಿಜವಾದ ಗೆಳೆಯ.

೬

ಒಬ್ಬ ಅರಸನಿದ್ದ. ಆ ಅರಸನಿಗೆ ಒಬ್ಬ ಪ್ರಧಾನನಿದ್ದ. ಅರಸನಿಗೆ ಒಬ್ಬ ಮಗ. ಪ್ರಧಾನಿಗೆ ಒಬ್ಬ ಮಗ. ರಾಜಕುಮಾರ ಪ್ರಧಾನಕುಮಾರರಿಬ್ಬರು ಗೆಳೆಯರು. ಚಿಕ್ಕಂದಿನಿಂದಲೇ ಕೂಡೇ ಆಡಿದವರು, ಬೆಳೆದವರು. ಅವರಿಗೆ ಪರಸ್ಪರರಲ್ಲಿ ವಿಶೇಷ ಪ್ರೇಮ. ಪ್ರಧಾನಕುಮಾರನ ಲಗ್ನವಾಗಿತ್ತು. ರಾಜಕುಮಾರನ ಲಗ್ನ ಇನ್ನು ಆಗಿದ್ದಿಲ್ಲ. ಅರಸ ಅವರಿಬ್ಬರಿಗೆ ಹೇಳಿದ್ದನು. "ನೀವಿಬ್ಬರು ಜಗತ್ತಿನಲ್ಲೆಲ್ಲ ಪ್ರವಾಸ ಮಾಡಿ ಅನುರೂಪಳಾದ ವಧುವನ್ನು ಹುಡುಕಿಕೊಂಡು ಬನ್ನಿರಿ.'' ಪ್ರಧಾನಕುಮಾರ ಅಂದನು 'ಹೌದು ನಾವು ಜಗತ್ತಿನಲ್ಲೆಲ್ಲ ಅಡ್ಡಾಡಿ ಬರುವೆವು.'

ಗೆಳೆಯರಿಬ್ಬರೂ ಹೊರಟರು. ವಾಯು ವೇಗದ ಚಪಲವಾದ ಎರಡು ಕುದುರೆಗಳನ್ನು ಅವರು ಹತ್ತಿ ಹೊರಟರು. ನದಿ, ಪರ್ವತ, ತಪೋವನ, ನಿಬಿಡ ಅರಣ್ಯ, ದೊಡ್ಡ ದೊಡ್ಡ ಪಟ್ಟಣ ಈ ರೀತಿ ನೋಡುತ್ತ ಅವರು ಮುಂದರಿದರು. ಆದರೆ ರಾಜಕುಮಾರನಿಗೆ ಒಪ್ಪುವಂಥ ವಧುವು ಅವರಿಗೆ ಎಲ್ಲಿಯೂ ಕಂಡು ಬರಲಿಲ್ಲ.

ಒಂದು ದಿವಸ ಅವರಿಬ್ಬರೂ ದಣಿದಿದ್ದರು. ಒಂದು ವಿಶಾಲವಾದ ಸರೋವರದ ದಂಡೆಯ ಮೇಲೆ ಅವರು ವಿಶ್ರಮಿಸಿದರು. ಸರೋವರದ ನೀರು ನಿರ್ಮಲ ಮತ್ತು ರುಚಿಕರವಾದದ್ದಿತ್ತು. ಸಂಜೆಯಾಗಿತ್ತು. ಸೂರ್ಯನು ಮುಳುಗಿದ್ದನು. ಮುಗಿಲಿನಲ್ಲೆಲ್ಲ ಕೆಂಪು ಬಣ್ಣ ಪಸರಿಸಿತ್ತು. ನೀರಿನಲ್ಲಿ ಆಕಾಶದ ಪಡಿನೆಳಲು ಮನೋಹರವಾಗಿ ಕಾಣುತ್ತಿತ್ತು. ಕುದುರೆಗಳಿಗೆ ನೀರು ಕುಡಿಸಿ, ಹುಲ್ಲು ಹಾಕಿ ಅವನ್ನು ಅಲ್ಲಿಯೇ ಒಂದು ಗಿಡಕ್ಕೆ ಕಟ್ಟಿದರು. ಅಲ್ಲಿಯೇ ಇಬ್ಬರೂ ಘಟ್ಟದ ಮೇಲೆ ಕುಳಿತು ಸಂಧ್ಯಾವಂದನೆ ಮಾಡಿದರು. ಫಲಹಾರ ಮಾಡಿ ಹಾಡು ಹಾಡುತ್ತ ಮಲಗಿದರು.

ಒಮ್ಮಿಂದೊಮ್ಮೆ ಒಂದು ಪ್ರಚಂಡ ಧ್ವನಿ ಕೇಳಿಸಿತು. ಸರೋವರ ದೊಳಗಿಂದ ಬಂಧಿರಬೇಕು ಎಂದು ಅವರಿಗೆ ಅನಿಸಿತ್ತು. ನೀರ ಮೇಲೆ ಯಾರಾವರೂ ಏನಾದರೂ ಅಪ್ಪಳಿಸುತ್ತಿರುವಂತೆ ಅನಿಸಿತು. ಕುದುರೆಗಳೆ ರಡೂ ಚೀರಾಡಹತ್ತಿದವು. ಇವರಿಬ್ಬರು ಆ ಧ್ವನಿಯಿಂದ ಎಚ್ಚತ್ತರು. ಸರೋವರದತ್ತ ನೋಡಿದಾಗ ಹೆಡೆ ಮೇಲಕ್ಕೆ ಮಾಡಿ ಒಂದು ಪ್ರಚಂಡ ಸರ್ಪ ಬಂದದ್ದು ಅವರಿಗೆ ಕಂಡಿತು. ರಾಜಕುಮಾರ ಪ್ರಧಾನಕುಮಾರ ರಿಬ್ಬರೂ ಗಾಬರಿಯಾದರು. ಆ ಪ್ರಚಂಡ ಹಾವು ಹೊರಗೆ ಬಂದಿತು. ಹೆಡೆಯಲ್ಲಿದ್ದ ಮಣಿಯನ್ನು ಅಲ್ಲಿ ಕೆಳಗೆ ಒಗೆಯಿತು. ಎಲ್ಲ ಕಡೆಯಲ್ಲಿಯೂ ಬೆಳಕು ಬಿದ್ದಿತು. ಇವರಿಬ್ಬರೂ ಒಂದು ಗಿಡವನ್ನೇರಿ ಕೂತರು. ಆ ಹಾವು ಅತ್ತಿತ್ತ ಭಕ್ಷ್ಯವನ್ನು ಶೋಧಿಸುತ್ತಿತ್ತು. ಅದು ಎರಡೂ ಕುದುರೆ ಗಳನ್ನೂ ತಿಂದುಬಿಟ್ಟಿತು. ತಮ್ಮನ್ನೂ ತಿನ್ನುವದೆಂದು ಇವರಿಬ್ಬರೂ ಗಾಬ ರಿಯಾದರು. ಆದರೆ ಅಷ್ಟರಲ್ಲಿ ಆ ಹಾವು ಎರಡನೆ ಕಡೆಗೆ ಹೋಯಿತು. ಸರ್ಪದ ಮಣಿಯ ಮೇಲೆ ಕುದುರೆಯ ಲದ್ದಿ ಹಾಕಿದರೆ ಅದರ ತೇಜ ಅಡ ಗುತ್ತದೆಂದು ಪ್ರಧಾನ ಕುಮಾರ ಕೇಳಿದ್ದ. ಅದು ಅವನಿಗೆ ನೆನಪಾಯಿತು. ಒಳ್ಳೇ ಧೈರ್ಯದಿಂದ ಗಿಡದ ಕೆಳಗೆ ಇಳಿದು ಸಾವಕಾಶವಾಗಿ ಆ ಮಣಿ ಬಿದ್ದಲ್ಲಿ ಹೋಗಿ ಅವನು ಅದನ್ನು ಕುದುರೆಯ ಲದ್ದಿಯಿಂದ ಮುಚ್ಚಿದ. ಎಲ್ಲ ಕಡೆಯಲ್ಲಿ ಕತ್ತಲಾಯಿತು. ಮತ್ತೆ ಗಿಡವನ್ನು ಚಪಲತೆಯಿಂದ ಏರಿ ಕೂತನು. ಆ ಹಾವು ಅತ್ತಿತ್ತ ಭುಸುಗುಡುತ್ತಿತ್ತು. ಮತ್ತು ಸ್ವಲ್ಪ ಹೊತ್ತಿ ನಲ್ಲಿ ಅದರ ಸುಳುವು ಕೇಳಿಸದಂತಾಯಿತು. ಹಾವು ಸರೋವರ ಸೇರಿರ ಬೇಕೆಂದು ಅವರಿಬ್ಬರಿಗೆ ಅನಿಸಿತು. ಬೆಳಗಾಯಿತು. ಎಲ್ಲ ದಿಕ್ಕುಗಳಲ್ಲಿ ಬೆಳಕು ಹಬ್ಬಿತು. ಮಿತ್ರರಿಬ್ಬರು ಕೆಳಗೆ ಇಳಿದರು. ಆ ಪ್ರಚಂಡವಾದ ಸರ್ಪವು ಅಲ್ಲಿ ಸತ್ತುಬಿದ್ದದ್ದನ್ನು ನೋಡಿದರು. ಅವರಿಗೆ ಆನಂದವಾ ಯಿತು. ಆದರೆ ಎರಡೂ ಕುದುರೆಗಳು ಸತ್ತದ್ದನ್ನು ನೋಡಿ ಮರ ಮರ. ಮರುಗಿದರು. ಪ್ರಧಾನಪುತ್ರ ಆ ಮಣಿ ತೊಳೆಯಲು ಸರೋವರಕ್ಕೆ ಹೋದ. ಅಲ್ಲಿ ಒಂದು ಆಶ್ಚರ್ಯದ ಸಂಗತಿಯನ್ನೇ ಕಂಡ! ನೀರಿನಲ್ಲಿ ಕಾಲಿಟ್ಟ ಕೂಡಲೆ ಸರೋವರದಲ್ಲಿ ಒಂದು ದೊಡ್ಡ ತೋಟ ಅಂದವಾದ ಕಟ್ಟಡಗಳು ಇದ್ದದ್ದು ಅವನ ದೃಷ್ಟಿಗೆ ಬಿದ್ದವು. ಆ ಮಣಿಯನ್ನು ಗಟ್ಟಿ

ಯಾಗಿ ಕೈಯಲ್ಲಿ ಹಿಡಿದು, ಗೆಳೆಯರಿಬ್ಬರು ತಮ್ಮ ತಮ್ಮ ಕೈಕೆಳನ್ನು ಹಿಡಿದು ಒಳಗೆ ಇಳಿದರು. ನೀರಲ್ಲಿ ಅವರಿಗೆ ಯಾವ ಅಡ್ಡಿ ಆತಂಕಗಳಾಗಲಿಲ್ಲ. ಅಲ್ಲಿದ್ದ ತೋಟದಲ್ಲಿ ಓಡಾಡಿದರು. ಹಣ್ಣುಹಂಪಲ ತಿಂದರು. ವಾಸನೆಗಾಗಿ ಹೂವುಗಳನ್ನು ಹರಿದುಕೊಂಡರು. ಹೀಗೆ ಆಡ್ಡಾಡುತ್ತ ಅಲ್ಲಿದ್ದ ಅರಮನೆಯ ಹತ್ತಿರ ಬಂದರು. ಒಳಗೆ ಹೋದರು. ಅಲ್ಲಿ ಒಂದು ಮಂಚದ ಮೇಲೆ ಒಬ್ಬ ಸುಂದರ ರಮಣಿ ಕೂತದ್ದನ್ನು ಕಂಡರು. ಅವಳ ಮುಖ ಮುದ್ರೆ ಖಿನ್ನವಾಗಿತ್ತು. ಇವರಿಬ್ಬರನ್ನು ನೋಡಿ ಅವಳು ಅಂದಳು. "ನೀವೇಕೆ ಇಲ್ಲಿ ಬಂದಿದ್ದೀರಿ? ಆ ದುಷ್ಟ ಸರ್ಪನು ನಿಮ್ಮನ್ನು ಕೊಂದುಬಿಡುವನು. ಅವನು ನನ್ನ ಮನೆಯವರನ್ನೆಲ್ಲ ಕೊಂದುಬಿಟ್ಟಿದ್ದಾನೆ. ನನ್ನನ್ನು ಮಾತ್ರ ಜೀವಂತ ಇಟ್ಟು ದಿನಾಲು ಕಾಡುತ್ತಾನೆ. ಸುಖದಿಂದ ಜೀವಿಸಲು ಕೊಡುವದಿಲ್ಲ, ಸಾಯಲೂ ಕೊಡುವದಿಲ್ಲ"

ರಾಜಕುಮಾರ ಹೇಳಿದ, "ಆ ಸರ್ಪವು ಮೇಲು ಸತ್ತುಬಿದ್ದಿದೆ. ಇಲ್ಲಿ ನೋಡು ಅವನ ಹಣೆಯಮೇಲಿದ್ದ ಮಣಿ. ನೀವು ಅಂಜಬೇಡಿರಿ. ನಮ್ಮೊಡನೆ ನಡೆಯಿರಿ.'' ಪ್ರಧಾನ ಕುಮಾರ ಅಂದನು, "ನಾವು ಈ ರಾಜಕುಮಾರನಿಗಾಗಿ ಯೋಗ್ಯ ವಧುವನ್ನು ಅರಿಸಲು ಹೊರಟಿದ್ದೇವೆ. ನೀವೇ ಅವನಿಗೆ ಯೋಗ್ಯರಿದ್ದೀರಿ. ರಾಜಕುಮಾರನು ನಿಮ್ಮ ಮನಸ್ಸಿಗೆ ಬಂದರೆ ನಾನು ನಿಮ್ಮಿಬ್ಬರ ವಿವಾಹ ಮಾಡುತ್ತೇನೆ.''

ಇಬ್ಬರೂ ನಾಚಿದರು; ಮೂಕ ಸಮ್ಮತಿಯನ್ನಿತ್ತರು. ಪ್ರಧಾನ ಕುಮಾರ ಹೂವಿನ ಮಾಲೆ ಮಾಡಿ ತಂದು ಕೊಟ್ಟನು. ಅವರಿಬ್ಬರ ಮದುವೆ ಆಯಿತು. "ನಡೆಯಿರಿ ಇನ್ನು ಮನೆಗೆ ಹೋಗುವ'' ಅಂದ ರಾಜಕುಮಾರ. ಪ್ರಧಾನಪುತ್ರ ಅಂದನು, ಮೊದಲು ನಾನು ಮುಂದೆ ಹೋಗುತ್ತೇನೆ. ನಾನು ಆನೆ, ಕುದುರೆ, ಸೈನ್ಯ ಎಲ್ಲವನ್ನು ತಕ್ಕೊಂಡು ಬರುತ್ತೇನೆ. ನೀವಿಬ್ಬರೂ ವಿಜೃಂಭಣೆಯಿಂದ ಬರತಕ್ಕದ್ದು.". ರಾಜಕುಮಾರ ಇದಕ್ಕೆ ಒಪ್ಪಿದ. ಅಗಲುವಾಗ ಅವರಿಬ್ಬರಿಗೆ ಬಹಳ ವ್ಯಸನವಾಯಿತು. "ಇಂದಿನಿಂದ ಒಂದು ತಿಂಗಳಲ್ಲಿ ನಾನು ಇಲ್ಲಿಗೆ ಬರುವೆ. ಅಂದು ನೀನು ಹೊರಗೆ ಬರಬೇಕು. ನಾನು ಹಾದಿ ಕಾಯುವೆ. ನೀನು ಮರೆಯಬೇಡ." ಎಂದು ಪ್ರಧಾನಪುತ್ರನು ಹೇಳಿದನು.

ರಾಜಕುಮಾರ ಅವನನ್ನು ಕಳುಹಿಸಲಿಕ್ಕೆ ಮೇಲೆ ಬಂದಿದ್ದ. ಅವನು ಹೋಗ ದಾರಿಯ ಕಡೆ ತುಸು ಹೊತ್ತು ನೋಡಿದ. ಅವನು ಕಾಣಿಸದಂತಾದ ಮೇಲೆ ಮತ್ತೆ ಸರೋವರದ ತಳಕ್ಕೆ ಹೋದನು. ರಾಜಕುಮಾರ ಮಧ್ಯಾಹ್ನದ ಊಟ ಮಾಡಿ ಮಲಗಿದ್ದ. ಆ ರಾಜಕುಮಾರನ ಹೆಂಡತಿ ಬಹಳ ದಿವಸ ಹೊರಗಿನ ಜಗತ್ತನ್ನು ಕಂಡಿದ್ದಿಲ್ಲ. ಅವನು ಮಲಗಿದಾಗ ಆ ಮಣಿ ತಕ್ಕೊಂಡು ಸಪ್ಪಳ ಮಾಡದೆ ಅವಳು ನೀರ ಹೊರಗೆ ಬಂದಳು. ಆಕಾಶ, ಗಿಡ, ಪಕ್ಷಿ, ನೋಡಿ ಅವಳಿಗೆ ಬಹಳೇ ಆನಂದವಾಯಿತು. ರಾಜಪುತ್ರ ಏಳುವ ಸಮಯವಾಗಿರಬಹುದೆಂದು ತಿಳಿದು ಅವಳ ಕೆಳಗೆ ಬಂದಳು. ಇನ್ನೂ ಅವನು ಎದ್ದಿರಲಿಲ್ಲ. ಈ ರೀತಿ ಅವಳು ರಾಜಕುಮಾರನಿಗೆ ತಿಳಿಯಗೊಡದೆ ನೀರ ಹೊರಗೆ ಬರುತ್ತಿದ್ದಳು.

ವಾಡಿಕೆಯಂತೆ ಒಂದು ದಿನ ಅವಳು ಮೇಲಕ್ಕೆ ಬಂದಿದ್ದಳು. ಅಷ್ಟರಲ್ಲಿ ಗಂಡಸರ ಧ್ವನಿ ಕೇಳಿಸಿತು. ಹತ್ತಿರವೇ ಇದ್ದ ರಾಜನ ಮಗ ಬೇಟೆಯಾಡಲು ಬಂದಿದ್ದ. ಅವನನ್ನು ನೋಡಿದ ಕೂಡಲೆ ಅವಳು ಸರೋವರ ಸೇರಿಬಿಟ್ಟಳು. ಆ ರಾಜಪುತ್ರ ಸರೋವರದ ದಂಡೆಯ ಮೇಲೆ ಬಂದು ನಿಂತನು. ಆ ಹುಡುಗೆಯನ್ನು ಮತ್ತೆ ನೋಡಬೇಕೆಂಬ ಆಸೆ ಅವನಿಗೆ. ಆದರೆ ಅವನಿಗೆ ಯಾರೂ ಕಾಣಲಿಲ್ಲ. ರಾಜಕುಮಾರನ ಸಂಗಡ ಬಂದ ಸಿಪಾಯರು ಅಲ್ಲಿಗೆ ಬಂದರು. "ಮಹಾರಾಜರು ಹಾದಿ ನೋಡುತ್ತಿರಬೇಕು." ಅಂದರು ಅವರು. ರಾಜಕುಮಾರ ಸುಮ್ಮನಿದ್ದ ಮಾತಾಡಲಿಲ್ಲ. ಅಲ್ಲಿಂದ ಸರಿಯಲೂ ಇಲ್ಲ. ಸಿಪಾಯಿಗಳಿಗೆ ಏನು ಮಾಡಬೇಕೆಂದು ತೋಚವಲ್ಲದು. ರಾಜಪುತ್ರ ಬಡಬಡಿಸಿದ, "ಈಗ ಕಂಡಳು, ಮತ್ತೆಲ್ಲಿ ಹೋದಳು." ಇದರ ಅರ್ಥ ಅವರಿಗಾರಿಗೂ ಹೊಳೆಯವಲ್ಲದು. ಹುಚ್ಚು ಹಿಡಿಯಿತು ಎಂದು ಕೆಲವರು, ಪಿಶಾಚಿಬಾಧೆಯಾಯಿತೆಂದು ಕೆಲವರು, ಜಲದೇವತೆ ಕೋಪಗೊಂಡಿದ್ದಾಳೆ ಎಂದು ಮತ್ತೆ ಕೆಲವರು ಊಹಿಸಹತ್ತಿದರು. ಅವನನ್ನು ಎತ್ತಿ ಕುದುರೆಯ ಮೇಲೆ ಹಾಕಿ ಕಟ್ಟಿದರು, ಮತ್ತು ರಾಜನ ಹತ್ತಿರ ತಂದರು. "ಮಹಾರಾಜ ಇವರು ಸರೋವರದ ದಂಡೆಯ ಮೇಲೆ ನಿಂತು "ಈಗ ಕಂಡಳು ಮತ್ತೆ ಮಾಯವಾದಳು,'' ಎಂದು ಅನ್ನುತ್ತಾ ನಿಂತಿದ್ದರು.

ಆ ಅರಸನಿಗೆ ಒಬ್ಬನೇ ಮಗ ಮತ್ತು ಒಬ್ಬಳೇ ಮಗಳು. ಅವನ ತರುವಾಯ ಈ ಮಗನೇ ರಾಜ್ಯಕ್ಕೆ ವಾರಸುದಾರನಿದ್ದ. ಒಬ್ಬನೇ ಒಬ್ಬ ಮಗ ಮತ್ತೆ ಅವನಿಗೆ ಹುಚ್ಚು! ಅರಸನಿಗೆ ಬಹಳ ವ್ಯಸನವಾಯಿತು. ವೈದ್ಯರು ಬಂದರು, ಮಾಂತ್ರಿಕರು ಬಂದರು, ಆದರೂ ಯಾರಿಗೂ ರಾಜ ಕುಮಾರನ ಬೇನೆಯು ನಿದಾನವಾಗಲಿಲ್ಲ. ಅರಸ ತನ್ನ ರಾಜ್ಯದಲ್ಲೆಲ್ಲ ಡಂಗುರ ಸಾರಿದ, ನನ್ನ ಮಗನನ್ನು ನೆಟ್ಟಗೆ ಮಾಡಿದವನಿಗೆ ನನ್ನ ಅರ್ಧ ರಾಜ್ಯ ವನ್ನು ಕೊಡುವೆ ಮತ್ತು ಮಗಳನ್ನು ಕೊಡುವೆ." ಬಹಳ ಜನ ಪ್ರಯತ್ನ ಮಾಡಿದರು ಆದರೆ ಅದು ಯಾರಿಗೂ ಸಾಧ್ಯವಾಗಲಿಲ್ಲ.

ಆ ಊರಲ್ಲಿ ಒಬ್ಬ ಮುದುಕಿ ಇದ್ದಳು. ರಾಜಪುತ್ರ ಸರೋವರದ ದಂಡೆಗೆ ಬಂದಾಗ ಈ ಮುದುಕಿ ಅಲ್ಲಿಯೇ ಸ್ವಲ್ಪ ದೂರ ನಿಂತಿದ್ದಳು. ಅವಳು ಅಡವಿಯಲ್ಲಿ ಒಣ ಕಟಿಗಿ ಆರಿಸುತ್ತಿದ್ದಳು. ರಾಜಕುಮಾರನ ವ್ಯಥೆಯ ಕಾರಣ ಅವಳಿಗೆ ಗೊತ್ತಿತ್ತು. ನೀರಿನೊಳಗಿಂದ ಮೇಲಕ್ಕೆ ಬರುವ ಹುಡುಗಿಯೇ ಇದಕ್ಕೆ ಕಾರಣ ಎಂಬ ಮಾತು ಅವಳು ಅರಿತಿದ್ದಳು. ಈ ಹುಡುಗಿಯನ್ನು ಫಸಾಯಿಸಿ ತಂದರೆ ತನಗೆ ಇನಾಮು ಸಿಕ್ಕುವದೆಂದು ಆ ಮುದುಕಿ ಮನಸಿನಲ್ಲಿ ತಿಳಿದುಕೊಂಡಳು.

ಅವಳು ಅರಮನೆಗೆ ಹೋದಳು. ಯಾರೂ ಅವಳಿಗೆ ಎಡೆಕೊಡ ಲಿಲ್ಲ. ಆದರೆ ಕೆಲಹೊತ್ತಿನ ಮೇಲೆ ಯಾವನೋ ಒಬ್ಬ ಅವಳನ್ನು ಅರಸನ ಕಡೆ ಕರೆದುಕೊಂಡು ಹೋದನು. "ಮಹಾರಾಜ, ನಿಮ್ಮ ಮಗನನ್ನು ನಾನು ನೆಟ್ಟಗೆ ಮಾಡುತ್ತೇನೆ. ಆದರೆ ನೀವು ನನ್ನ ಮಗನಿಗೆ ನಿಮ್ಮ ಮಗ ಳನ್ನು ಕೊಡಬೇಕು ಮತ್ತು ಅರ್ಧ ರಾಜ್ಯವನ್ನು ಕೊಡಬೇಕು. ಇದಕ್ಕೆ ನೀವು ಒಪ್ಪಿದರೆ ನಾನು ನಿಮ್ಮ ಮಗನನ್ನು ನೆಟ್ಟಗೆ ಮಾಡುವೆ." ಎಂದು ಆ ಮುದುಕಿ ರಾಜನಿಗೆ ಅಂದಳು. ಅರಸ ಒಪ್ಪಿಕೊಂಡ. ಅವಳು ಹೇಳಿ ದಳು, "ಆ ಸರೋವರದ ಹತ್ತರ ನನಗೆ ಒಂದು ಗುಡಿಸಲ ಹಾಕಿಕೊಡಿರಿ, ಮತ್ತು ಅಲ್ಲಿಯೇ ಯಾವಾಗಲೂ ಐವತ್ತು ಜನ ಸೈನಿಕರನ್ನು ಇಡಿರಿ. ಅವರು ಸುತ್ತು ಮುತ್ತಲು ಅಡಗಿಕೊಂಡಿರಬೇಕು. ನಾನು ಚಪ್ಪಾಳೆ ಹೊಡೆದ ಕೂಡಲೆ ಬರಬೇಕು." ಅರಸ ಆ ಪ್ರಕಾರ ಎಲ್ಲ ವ್ಯವಸ್ಥೆ ಮಾಡಿ ಕೊಟ್ಟನು.

ಒಂದು ದಿನ ಆ ಹುಡುಗಿ ನೀರೊಳಗಿಂದ ಹೊರಗೆ ಬಂದು ಘಟ್ಟದ ಮೇಲೆ ಕೂತಿದ್ದಳು. ಅಲ್ಲಿ ಈ ಮುದುಕಿ ಹೋದಳು. ಹೆಣ್ಣು ಮಗಳು ಬಂದದ್ದರಿಂದ ಆ ಹುಡುಗಿ ನೀರಲ್ಲಿ ಹೋಗಲಿಲ್ಲ. ಮುದುಕಿ ಆ ಹುಡುಗಿಯ ಹತ್ತರ ಹೋಗಿ ಒಳ್ಳೇ ಮಮತೆಯಿಂದ ಅಂದಳು, "ಇಲ್ಲಿ ಬಾರವ್ವಾ, ನಾನು ನಿನ್ನ ಹೆರಳನ್ನು ಹಾಕುತ್ತೇನೆ. ನಾಳೆ ಬರುವಾಗ ನೀನು ಹೂವು ತಕ್ಕೊಂಡು ಬಾ," ಆ ಮುದುಕಿ ಆ ಹುಡುಗಿಗೆ ತನ್ನ ತಾಯಿಯಂತೆ ಕಂಡಳು. ತಾಯಿಯ ನೆನಪಾಗಿ ಕಣ್ಣಿಗೆ ನೀರು ಬಂದವು. "ಯಾಕವ್ವಾ ಅಳುವದು ಏತಕ್ಕೆ? ನಿನಗಿರುವ ದುಃಖವಾದರೂ ಯಾವುದು?" ಎಂದು ಆ ಮುದುಕಿ ಕೇಳಿದಳು. "ನನಗೆ ತೊಂದರೆ ದುಃಖ ಯಾವವೂ ಇಲ್ಲ. ತಾಯಿಯ ನೆನಪಾಗಿ ಕಣ್ಣಲ್ಲಿ ನೀರು ಬಂದವು. ಇಷ್ಟೇ. ನಾನು ಈಗ ಹೋಗುತ್ತೇನೆ. ಎಂದು ಆ ಹುಡುಗಿ ಅಂದಳು.

ಮುದುಕಿ ಆ ಹುಡುಗಿಯ ನಂಬುಗೆಯ ಗೆಳತಿಯಾಗಿಬಿಟ್ಟಳು. ದಿನಾಲು ಅವಳು ಮುದುಕಿಯ ಕಡೆ ಹೋಗಿ ಕೂಡುತ್ತಿದ್ದಳು. ಒಂದು ದಿನ ಆ ಕಪಟಿಯಾದ ಮುದುಕಿ ಆ ಹುಡುಗಿಗೆ ಅಂದಳು., ''ದಿನಾಲು ನಿನಗೆ ಕೇಳಬೇಕು ಕೇಳಬೇಕು ಅಂತೀನಿ, ಆದರೆ ಮರತೇಬಿಡುತ್ತೇನೆ. ಇವತ್ತು ನೆನಪು ಆಗಿದೆ ಕೇಳತೀನಿ. ನೀನು ನೀರಲ್ಲಿ ಹೋಗುವದು ಹೇಗೆ? ಬರುವದು ಹೇಗೆ? ನಿನ್ನ ಉಡುಪು ತೋಯುವದಿಲ್ಲ. ಎನಾದರೊಂದು ಯುಕ್ತಿ ಅದೆಯೋ?'' ಆ ಹುಡುಗಿ ನಿಷ್ಕಪಟೆ, ಅವಳು ಹೇಳಿದಳು, ''ನನ್ನ ಕಡೆ ಒಂದು ಮಣಿ ಇದೆ. ಅದು ಕೈಯಲ್ಲಿ ಇತ್ತೆಂದರೆ ,ಎಲ್ಲವೂ ಸಾಧ್ಯವಾಗುವದು.'' "ನೋಡಿಯಾದರೂ ನೋಡುವಾ ಆ ಮಣಿ. ಮಣಿಯಲ್ಲಿ ಇಷ್ಟು ಸಾಮರ್ಥ್ಯವೇ?" ಹೀಗಂದು ಆ ಮುದುಕಿ ಮಣಿ ಅವಳ ಕೈಯಿಂದ ಇಸಗೊಂಡು ತನ್ನ ನೀರಿಗೆಯಲ್ಲಿ ಇಟ್ಟಳು, ಮತ್ತು ಚಪ್ಪಾಳೆ ಹೊಡೆದಳು; ಚಪ್ಪಾಳೆ ಹೊಡೆದ ಕೂಡಲೆ ಯಮದೂತರಂತೆ ಹತ್ತು ಸಿಪಾಯರು ಬಂದರು. ''ಹಿಡಿಯಿರಿ ಈ ಹುಡುಗಿಯನ್ನು, ಹಾಕಿರಿ ಕುದುರೆಯ ಮೇಲೆ ಮತ್ತು ಅರಸನ ಕಡೆಗೆ ಒಯ್ಯಿರಿ'' ಅಂದಳು ಆ ಮುದುಕಿ.

ಆ ಹುಡುಗಿಯ ಚೀರಾಟದ ಕಡೆಗೆ ಯಾರೂ ಲಕ್ಷಕೊಡಲಿಲ್ಲ. ಅವಳನ್ನು ಕಟ್ಟಿ ಅರಮನೆಗೆ ಒಯ್ದರು. ಅವರ ಬೆನ್ನ ಹಿಂದೆ ಮುದುಕಿ ಬಂದಳು. ಅರಮನೆಯ ಸುತ್ತಲೂ ಜನಜಾತ್ರೆ ಕೂಡಿತು. ರಾಜಕುಮಾರ ಅವಳನ್ನು ನೋಡಿದ ಕೂಡಲೆ, "ಹೌದು ಇದೇ ಆ ಹುಡುಗಿ. ಸರೋವರದ ದಂಡೆಯ ಮೇಲೆ ಕಂಡೆ. ಅಷ್ಟರಲ್ಲಿ ನೀರಿನಲ್ಲಿ ಅದೃಶ್ಯಳಾದಳು. ನೀನು ನನ್ನವಳಾಗು. ಅರಸನೇ ನನ್ನ ಲಗ್ನ ಇವಳೊಡನೆ ಮಾಡು" ಅಂದನು. ಆ ಹುಡುಗಿ ಹೇಳಿದಳು, "ನಾನು ಪರಸ್ತ್ರೀ. ನನ್ನ ಲಗ್ನವಾಗಿದೆ. ಈ ರೀತಿ ಅನ್ಯಾಯ ಮಾಡುವದು ಯೋಗ್ಯವೇ? ಈ ಪಾಪ ಮಾಡಬೇಡಿರಿ. ನನಗೆ ಆರು ತಿಂಗಳ ಅವಧಿಯನ್ನಾದರೂ ಕೊಡಿರಿ. ಅಷ್ಟರಲ್ಲಿ ನನ್ನ ಪತಿ ಬಂದರೆ ನೆಟ್ಟಗೆ, ಇಲ್ಲದಿದ್ದರೆ ಮುಂದೆ ನೋಡುವ." "ಈ ಆರುತಿಂಗಳು ಹೇಗಾದರು ಕಳೆಯಬಹುದು" ಅಂದಕೊಂಡ ರಾಜಕುಮಾರ. ಅವನ ಹೃದಯದಲ್ಲಿ ಆಸೆ ಹುಟ್ಟಿತು. ಅವನ ಹುಚ್ಚು ಹೋಯಿತು. ಮುದುಕಿ ಪಣ ಗೆದ್ದಳು.

ಮುದುಕಿಯ ಮಗ ಹುಚ್ಚನಂತೆ ಇದ್ದ. ಮಾತನಾಡಲು ಬರತಿದ್ದಿಲ್ಲ. ಅವನಿಗೆ ಎರಡೇ ಶಬ್ದ ಬರುತ್ತಿದ್ದವು. "ಹೌದು" ಅನ್ನುವದಿದ್ದರೆ ಬವ್ ಬವ್ ಬವ್ ಅನ್ನುತ್ತಿದ್ದ. "ಇಲ್ಲ" ಅನ್ನುವದಿದ್ದರೆ ಥುಪ್, ಥುಪ್, ಥುಪ್ ಅನುತ್ತಿದ್ದ. ಮೈಮೇಲೆ ಅರಿವೆ ಹಾಕುತ್ತಿದ್ದಿಲ್ಲ. ಗಿಡಿದ ಎಲೆ ಟೊಂಗಿ ಕೂಡಿಸಿ ತನ್ನ ನಡುವಿಗೆ ಕಟ್ಟಿಕೊಳ್ಳುತ್ತಿದ್ದ. ಮೈಗೆಲ್ಲ ಭಸ್ಮ ಹಚ್ಚುತ್ತಿದ್ದ. ಲಂಗೋಟಿ ಒಂದು ಧರಿಸುತ್ತಿದ್ದ. ಇಂಥ ಹುಚ್ಚನ ಅವತಾರ ಇದ್ದ ಮುದುಕಿಯ ಮಗ ಮನೆಯೊಳಗೆ ಇರುವದು ಕಡಿಮೆ. ನಾಲ್ಕಾರುತಿಂಗಳಿಗೊಮ್ಮೆ ಬರುತ್ತಿದ್ದ. ಮುದುಕಿ ಅವನ ಹಾದಿ ಕಾಯಕೋತ ಇದ್ದಳು. ಮಗ ಬಂದು ಅರಸನಾಗುವ ಎಂದು ತಿಳಿದು ತನ್ನ ಮಗ ಅರಸನ ಅಳಿಯನಾಗುವನೆಂದು ಎಲ್ಲರ ಇದುರು ಜಂಬಕೊಚ್ಚುವಳು. ಆದರೆ ಮಗ ಮನೆಗೆ ಬರುವಲ್ಲ.

ಇತ್ತ ರಾಜಪುತ್ರ ನಿರೋಳಗೆ ಸಿಕ್ಕಬಿದ್ದ. ಹೆಂಡತಿ ತನ್ನನ್ನು ಮೋಸ ಮಾಡಿ ಹೋದಳು; ಇದು ಸಾಧ್ಯವೆ? ಯಾರಾದರೂ ಮೋಸಮಾಡಿರ

ಲಿಕ್ಕೆ ಬೇಕು. ಪ್ರಧಾನ ಕುಮಾರ ಈ ರೀತಿ ಮಾಡಿದನೇ ಎಂಬ ಸಂಶಯ ವೂ ಬಂದಿತು. ಈ ರೀತಿ ಮನಸಿನಲ್ಲಿ ನೂರಾರು ಸಂಶಯಗಳು ಬಂದವು. ನೀರಿನಲ್ಲಿ ಅವನು ಚಡಪಡಿಸುತ್ತಿದ್ದ. ಹಣ್ಣು ರುಚಿಹತ್ತಲೊಲ್ಲದು. ಹೂವು ಸೇರವಲ್ಲವು. ಅವನು ಅಶಕ್ತನಾದನು.

ಪ್ರಧಾನಪುತ್ರ ಮೊದಲೇ ನಿಶ್ಚಯಿಸಿದಂತೆ ಒಳ್ಳೆ ವಿಜೃಂಭಣೆಯಿಂದ ರಾಜಪುತ್ರನನ್ನು ಸ್ವಾಗತಿಸಲು ಬಂದನು. ಘಟ್ಟದ ಮೇಲೆ ಕೂತು ಬಹಳ ಹೊತ್ತು ಹಾದಿ ನೋಡಿದನು. ಸಂಜೆಯಾದರೂ ಯಾರೂ ಬರಲಿಲ್ಲ. ಒಂದೆರಡು ದಿವಸಗಳಾದವು ಆದರೂ ರಾಜಪುತ್ರ ಬರಲಿಲ್ಲ. ಅವನ ಮನ ಸ್ಸಿನಲ್ಲಿ ಚಿಂತೆ. ನಾಲ್ಕು ದಿವಸಗಳಾದವು. ಈ ರೀತಿ ಹಾದಿ ಕಾಯುವ ದಾದರೂ ಎಷ್ಟು ದಿವಸ ಎಂದು ಆಲೋಚನೆ ಮಾಡಿದ. ಇತ್ತ ಅರಸನಿಗೂ ಚಿಂತೆ. ಇದನ್ನೆಲ್ಲ ಯೋಚಿಸಿ ಪ್ರಧಾನಪುತ್ರ ಅವನ ಜೊತೆಗೆ ಬಂದವರಿಗೆಲ್ಲ ಅಂದ್ರ, "ನೀವು ತಿರುಗಿ ಹೋಗಿರಿ. ನಾನು ರಾಜಕುಮಾರನನ್ನು ನನ್ನ ಜೊತೆಗೆ ಕರಕೊಂಡು ಬರದೆ ನನ್ನ ಮುಖವನ್ನು ತೋರಿಸುವದಿಲ್ಲ." ಒಳ್ಳೆ ಉತ್ಸಾಹದಿಂದ ಬಂದವರೆಲ್ಲರೂ ವಿಮನಸ್ಕರಾಗಿ ನಿರಾಶರಾಗಿ ತಿರುಗಿ ಹೋದರು.

ಸುತ್ತಮುತ್ತಲಿದ್ದ ಹಳ್ಳಿಗಳಿಗೆಲ್ಲ ಹೋಗಿಬಂದನು ಪ್ರಧಾನಪುತ್ರನು. ಆದರೆ ಅವನಿಗೆ ಯಾವ ಸಂಗತಿ ತಿಳಿಯಲಿಲ್ಲ. ಹೀಗೆ ಹೋಗತ ಹೋಗತ ಒಂದು ದಿವಸ ಅಲ್ಲಿ ನೆರೆಯಲ್ಲಿದ್ದ ಅರಸನ ರಾಜಧಾನಿಗೆ ಹೋದನು. ಅಲ್ಲಿ ದಿನಾಲು ಉತ್ಸವಗಳು ನಡೆದಿದ್ದವು. ಈ ಉತ್ಸವವೇತಕ್ಕೆ? ಎಂದು ಅವನು ಜನರನ್ನು ಕೇಳಿದ. "ನಮ್ಮ ರಾಜಪುತ್ರನ ಹುಚ್ಚು ಹೋಗಿದೆ. ಅವನಿಗೆ ಆ ಸರೋವರದ ಹುಡುಗಿ ಸಿಕ್ಕಿದ್ದಾಳೆ. ಇನ್ನು ನಾಲ್ಕು ದಿವಸ ದಲ್ಲಿ ಲಗ್ನವಾಗತಕ್ಕದ್ದಿದೆ" ಎಂದು ಜನ ಹೇಳಿದರು. ಅವನಿಗೆ ಬೆರಗಾ ಯಿತು. ಮತ್ತೆ ಹೆಚ್ಚು ಸಂಗತಿ ತಿಳಿದುಕೊಂಡ. ಮುದುಕಿ ಮೋಸ ಮಾಡಿದ್ದು, ಅವಳ ಹತ್ತಿರ ಮಣಿ ಇದದ್ದು ತಿಳಿಯಿತು. ಅವಳ ಮಗ ಅರಸನಾಗುವದು ತಿಳಿದುಕೊಂಡ. ಅವನು ಊರಲ್ಲಿ ಇಲ್ಲದೆ ಇದ್ದದ್ದು ತಿಳಿದುಕೊಂಡ. ಅವನು ಹೇಗಿದ್ದಾನೆ, ಹೇಗೆ ಹುಚ್ಚನಂತೆ ನಡೆದುಕೊಳ್ಳು

ತ್ತಾನೆ, ಇವೆಲ್ಲ ವಿವರಗಳನ್ನು ತಿಳಿದುಕೊಂಡ. ಜನ ಅವನಿಗೆ ಹೇಳಿದರು, "ಅವನು ನೋಡಲಿಕ್ಕೆ ನಿಮ್ಮಂತೆ ಇದ್ದಾನೆ, ಆದರೆ ಹುಚ್ಚು, ಮೈಗೆಲ್ಲ ಭಸ್ಮ, ಒಂದು ಲಂಗೋಟಿ ಮತ್ತು ನಡದ ಸುತ್ತು ಗಿಡದ ಎಲೆ, ಹೀಗಿದೆ ಅವನ ಅವತಾರ" ಅಂದರು. ಅವನು ಬಮ್ ಬಮ್ ಬಮ್, ಧುಪ್ ಧುಪ್ ಧುಪ್ ಅನ್ನುತ್ತಾನೆಂದು ಹೇಳಿದರು.

ಪ್ರಧಾನಪುತ್ರ ಸಾಹಸ ಮಾಡಲು ಉದ್ಯುಕ್ತನಾದ. ಮುದುಕಿಯ ಮಗನ ವೇಷ ಹಾಕುವದನ್ನು ನಿಶ್ಚಯಿಸಿದನು. ಅವನು ಊರ ಹೊರಗೆ ಬಂದನು. ತನ್ನ ಅರವಿ ತೆಗೆದನು. ಮುದುಕಿಯ ಮಗನ ವೇಷ ಹಾಕಿದನು. ಬಮ್ ಬಮ್ ಬಮ್, ಧುಪ್ ಧುಪ್ ಧುಪ್ ಅನ್ನುತ್ತ ಊರಲ್ಲಿ ಬಂದನು.

ರಾತ್ರಿಯಾಯಿತು. ಪ್ರಧಾನ ಕುಮಾರ ಮುದುಕಿಯ ಮನೆಗೆ ಈ ವೇಷದಲ್ಲಿ ಬಂದ. ಅವನನ್ನು ನೋಡಿ ಅವಳಿಗೆ ಆನಂದವಾಯಿತು. ಅವನನ್ನು ಕೈಹಿಡಿದು ಕೂಡ್ರಿಸಿದಳು. ಸುಮ್ಮನೆ ಮನೆಯೊಳಗೆ ಬಂದದ್ದು ನೋಡಿ ಅವಳಿಗೆ ಆಶ್ಚರ್ಯವೆನಿಸಿತು. ಮಗ ಸುಧಾರಿಸಿದಾನೆ ಅಂದು ಕೊಂಡಳು.

"ಮಗು ನೀನು ಲಗ್ನವಾಗತಿಯಾ?" ಮುದುಕಿ ಕೇಳಿದಳು. "ಬಮ್ ಬಮ್ ಬಮ್" ಅಂದಾ ಮಗನು. "ಅರಸನ ಮಗಳೊಡನೆ ಲಗ್ನವಾಗತಿಯಾ?" "ಬಮ್ ಬಮ್ ಬಮ್" "ನನ್ನಹತ್ತರಿದ್ದ ಮಣಿ ಬೇಕೆ ನಿನಗೆ?" "ಬಮ್ ಬಮ್ ಬಮ್" ಅಂದನು ಆ ಹುಡುಗ. ಆ ಮಣಿ ತಕ್ಕೊಂಡ. ನಡದಲ್ಲಿ ಸಿಗಸಿದ. ಮಗನು ಕೊಟ್ಟ ಉತ್ತರ ಕೇಳಿ ಮುದುಕಿಗೆ ಆನಂದವಾಯಿತು.

"ನಿನ್ನೊಡನೆ ಲಗ್ನ ಮಾಡಿಕೊಳ್ಳುವ ರಾಜಕುಮಾರಿಯನ್ನು ನೀನು ನೋಡಲು ಬಯಸುತ್ತೀಯಾ?" ಮುದುಕಿ ಕೇಳಿದಳು. "ಬಮ್ ಬಮ್" ಎಂದನು ಆ ವೇಷಧಾರಿ ಪ್ರಧಾನಪುತ್ರ. "ಅರಮನೆಗೆ ಬರುತ್ತೀಯಾ?" "ಬಮ್ ಬಮ್ ಬಮ್." ಮಗ ಅರಮನೆಗೆ ಬರಲು ಸಿದ್ಧವಿರುವದನ್ನು ನೋಡಿ ತಾಯಿಗೆ ಬಹಳ ಆನಂದವಾಯಿತು.

"ನಡೆ ನನ್ನೊಡನೆ ಅರಮನೆಗೆ. ನೀನು ರಾಜನ ಅಳಿಯನಾಗುವಿ. ಅರ್ಧ ರಾಜ್ಯ ನಿನಗೆ ಸಿಕ್ಕುವದು. ಇನ್ನು ಮುಂದೆ ಈ ಹುಚ್ಚುತನ ಬಿಡುವೆಯಾ?" ಎಂದು ಕೇಳಿದಳು ತಾಯಿ. "ಬವ್ ಬವ್ ಬವ್" ಅಂದನು.

ವೇಷಧಾರಿ ಪ್ರಧಾನ ಪುತ್ರನೊಡನೆ ಮುದುಕಿ ಅರಮನೆಗೆ ಬಂದಳು. ಅರಮನೆಯಲ್ಲಿ ಅವಳಿಗೆ ಬಹಳ ಮಾನದಸ್ಥಾನವಿತ್ತು. ಜೇಕಾದಲ್ಲಿ ಅವಳು ಹೋಗಬಹುದಾಗಿತ್ತು. ಅವಳು ಅಲ್ಲಿಗೆ ಬಂದು, "ನನ್ನ ಮಗ ಬಂದಿದ್ದಾನೆ. ಅವನು ರಾಜಕುಮಾರಿಯನ್ನು ನೋಡಲು ಇಚ್ಛಿಸುತ್ತಾನೆ, ಅವನಿಗೆ ತೋರಿಸಿರಿ ಅವಳನ್ನು" ಅಂದಳು. ರಾಜಕುಮಾರಿ ಹೊರಗೆ ಬಂದು ತಲೆಬಾಗಿಸಿ ನಿಂತಳು. ಮುದುಕಿ ಮಗನಿಗೆ "ರಾಜಕುಮಾರಿ ಮನಸಿಗೆ ಬಂದಳೇನು" ಎಂದು ಕೇಳಿದಳು. "ಬವ್ ಬವ್ ಬವ್" ಅವನು ಅಂದನು. "ನಡೆ ಇನ್ನು ಮನೆಗೆ" ಅಂದಳು ತಾಯಿ. "ಧುಪ್ ಧುಪ್ ಧುಪ್" ಅವನಂದನು. "ಹಾಗಾದರೆ ನೀನು ಇಲ್ಲೆ ಇರುತ್ತಿಯೋ" ಅಂದಳು ತಾಯಿ. "ಬವ್ ಬವ್ ಬವ್" ಅಂದನು ಅವನು. "ಹಾಗಾದರೆ ಮನೆಗೆ ಬರುವದೇ ಇಲ್ಲವೊ?" ಎಂದು ಕೇಳಿದಳು. "ಧುಪ್ ಧುಪ್ ಧುಪ್" ಅವನು ಅಂದನು. ಮುದುಕಿ ಮನೆಗೆ ಹೋದಳು. ಬವ್ ಬವ್, ಧುಪ್ ಧುಪ್ ಅನ್ನುತ್ತ ವೇಷಧಾರಿ ಪ್ರಧಾನ ಕುಮಾರ ಅಲ್ಲೇ ಉಳಿದ. ಅಷ್ಟರಲ್ಲಿ ಸರೋವರದ ಹುಡುಗಿ ಅಲ್ಲಿಯೇ ಅಳುತ್ತ ಕೂತದ್ದು ಕಂಡು ಬಂದಿತು. ಒಮ್ಮೆಲೆ ಅವಳ ಹತ್ತರ ಹೋಗಿ, "ನಾನು ಪ್ರಧಾನಪುತ್ರ, ಮಣಿ ದೊರಕಿಸಿದ್ದೇನೆ. ಇವತ್ತು ರಾತ್ರಿ ಓಡಿ ಹೋಗುವ" ಎಂದು ಅವಳ ಕಿವಿಯಲ್ಲಿ ಹೇಳಿದ. ಅಷ್ಟರಲ್ಲಿ ಸಿಪಾಯರು ಬಂದು, 'ಏ ಹುಚ್ಚ, ಇವಳಲ್ಲ ನಿನ್ನ ಹೆಂಡತಿ. ಅವಳು ಅತ್ತ ಇದ್ದಾಳೆ' ಅಂದರು.

ರಾತ್ರಿಯಾಯಿತು. ಕಾವಲುಗಾರರು ಅತ್ತಿತ್ತ ಓಡಾಡುತ್ತಿದ್ದರು. ಈ ವೇಷಧಾರಿ ಪ್ರಧಾನ ಕುಮಾರನು ಬಾಗಿಲವರೆಗೆ ಹೋಗುತ್ತಿದ್ದ ಮತ್ತ ತಿರುಗುತ್ತಿದ್ದ. "ಈ ಹುಚ್ಚ ಇಡೀ ರಾತ್ರಿ ಹೀಗೆ ಓಡಾಡುವಂತೆ ತೋರುತ್ತದೆ. ಒಳ್ಳೇ ಚನ್ನಾಗಿ ಕಾವಲು ಮಾಡುವನು. ನಾವು ಸ್ವಲ್ಪ ಅಡ್ಡಾ

ಗುವ'' ಎಂದು ವಿಚಾರ ಮಾಡಿ ಕಾವಲುಗಾರರು ಮಲಗಿಕೊಂಡರು. ಅವರು ಮಲಗಿದ್ದನ್ನು ನೋಡಿ, ಸರೋವರದ ಹುಡುಗಿಯನ್ನು ಹೆಗಲ ಮೇಲೆ ಹಾಕಿಕೊಂಡು ಪ್ರಧಾನ ಪುತ್ರ ಓಡಿಹೋದ. ಊರ ಹೊರಗೆ ಬಂದು ತನ್ನ ಅರಿವೆ ಹಾಕಿಕೊಂಡನು. ಇನ್ನೂ ರಾತ್ರಿ ಇರುವದರೊಳಗಾಗಿ ಇಬ್ಬರೂ ಆ ಸರೋವರದ ದಂಡೆಯ ಮೇಲೆ ಬಂದರು. ಮಣಿ ಇದ್ದೇ ಇತ್ತು. ಅದರ ಸಹಾಯದಿಂದ ಸರೋವರದ ತಳಕ್ಕೆ ಹೋದರು. ಅಲ್ಲಿ ಪಾಸೆಯಲ್ಲಿ ರಾಜಪುತ್ರನು ಪ್ರಾರ್ಥನೆ ಮಾಡುತ್ತ ಕುಳಿತಿದ್ದನ್ನು ನೋಡಿದರು ಸಂಕಟ ಒಂದಾಗ ದೇವರ ಹೊರತು ಮತ್ತಾರು ನಮಗೆ? ಸಂಕಟಕ್ಕೆ ಗುರಿಯಾದಾಗ ನಾವು ಯಾರನ್ನು ನೆನಿಸುತ್ತೇವೋ ಅವರೇ ನಮ್ಮ ನಿಜ ವಾದ ಗೆಳೆಯರು. ಆ ಹುಡುಗಿ ರಾಜಕುಮಾರನ ಕಾಲು ಹಿಡಿದಳು. ರಾಜಕುಮಾರ ಕಣ್ಣು ತೆರೆದು ನೋಡಿದ. ಅವನ ಇದುರು ಅವನ ಹೆಂಡತಿ ಮತ್ತು ಅವನ ಜೀವದ ಗೆಳೆಯ ಪ್ರಧಾನ ಕುಮಾರ! ಎಲ್ಲರಿಗೂ ಆನಂದ ತಾನು ರಾಜಕುಮಾರನಿಗೆ ಹೇಳದೆ ಹೊರಗೆ ಹೋದದ್ದರ ಪರಿಣಾಮವಿದು ಎಂದೆಂದು ಆ ಹುಡುಗಿ ಅಳಹತ್ತಿದಳು. ರಾಜಕುಮಾರನ ಕ್ಷಮೆ ಕೋರಿದಳು.

ಎಲ್ಲರೂ ಫಲಹಾರ ಮಾಡಿದರು. ಪ್ರಧಾನ ಪುತ್ರನು ಅಂದನು, ''ನಾವು ಈಗಿಂದೀಗ ಹೊರಡುವ. ಯಾವ ತರದ ಆಡಂಬರ ಬೇಡ. ಇಲ್ಲದಿದ್ದರೆ ನಾವು ಸಂಕಟಕ್ಕೆ ಗುರಿಯಾಗಬಹುದು." ಅವರು ಹೋಗುವ ದೆಂದು ನಿಶ್ಚಯಿಸಿದರು. ಅವರು ಸರೋವರದ ಹೊರಗೆ ಬಿದ್ದರು. ಅಷ್ಟರಲ್ಲಿ ಸೂರ್ಯನಾರಾಯಣನು ಮೂಡಿದನು. ಸರೋವರದ ಮೇಲೆ ಮೂರು ಅರಳಿದ ಕಮಲಗಳಂತೆ ಕಂಡರು ಇವರು!

ಮೂವರು ನಡೆಯಲಾರಂಭಿಸಿದರು. ಆ ಬಾಲೆಯ ಕಮಲದಂತಿ ರುವ ಪಾದಗಳು ಬಾತವು. ಅವಳಿಗೆ ನಡೆಯುವದು ಗೊತ್ತೇ ಇದ್ದಿಲ್ಲ. ಸಂಜೆಯಾದೊಡನೆ ಅವರು ವಿಶ್ರಮಿಸುತ್ತಿದ್ದರು. ಪ್ರಧಾನಪುತ್ರ ನಿದ್ದೆ ಮಾಡುತ್ತಿದ್ದಿಲ್ಲ. ಅವನು ಕಾವಲು ಇರುತ್ತಿದ್ದ. ಒಂದು ದಿವಸ ರಾತ್ರಿ ಹೀಗೆ ಅವರು ಅಡವಿಯಲ್ಲಿ ಒಂದು ಗಿಡದ ಅಡಿಯಲ್ಲಿ ಮಲಗಿದಾಗ ಎರಡು

ಹಕ್ಕಿಗಳು ಮಾನುಷ್ಯರಂತೆ ನುಡಿದದ್ದು ಕೇಳಿಸಿತು. ಗಂಡು ಹಕ್ಕಿ ಹೆಣ್ಣು ಹಕ್ಕಿಯೊತನೆ ಮಾತಾಡುತ್ತಿತ್ತು.

"ಈ ಪ್ರಧಾನಕುಮಾರ ರಾಜಕುಮಾರನನ್ನು ಉಳಿಸಲು ಎಷ್ಟು ಪ್ರಯತ್ನ ಮಾಡಿದರೂ ರಾಜಕುಮಾರನ ಮರಣ ಸಮೀಪಿಸಿದೆ.'' ಎಂದು ಗಂಡು ಹಕ್ಕಿ ಅಂದಿತು. "ಅದು ಹೇಗೆ?" ಎಂದು ಹೆಣ್ಣು ಹಕ್ಕಿ ಕೇಳಿತು. ''ರಾಜಕುಮಾರ ತನ್ನ ಹೆಂಡತಿಯೊಡನೆ ಮತ್ತು ಗೆಳೆಯನೊಡನೆ ಬರುತ್ತಾನೆಂಬ ಮಾತು ಅರಸನಿಗೆ ಗೊತ್ತು ಅದೆ. ಮತ್ತು ಅರಸನ ಆನೆ, ಕುದುರೆ, ಶೃಂಗರಿಸಿ ಕಳಿಸಿದ್ದಾನೆ. ಆನೆ ಪ್ರಧಾನಕುಮಾರನಿಗಾಗಿ ಮತ್ತು ಕುದುರೆ ರಾಜಪುತ್ರನಿಗಾಗಿ ಶೃಂಗರಿಸಿದ್ದಾರೆ. ರಾಜಕುಮಾರ ಕೂತ ಕೂಡಲೇ ಕುದುರೆ ಬೀಳುವದು ಮತ್ತು ಅವನು ಸಾಯುವನು." ಗಂಡು ಹಕ್ಕಿ ಹೇಳಿತು.

"ರಾಜಕುಮಾರನಿಗೆ ಏನಾದರೂ ಮಾಡಿ ಕುದುರೆಯ ಮೇಲೆ ಕೂಡಗೊಡದಿದ್ದರೆ ಅವನು ಉಳಿಯಬಹುದೇ? ಎಂದು ಹೆಣ್ಣು ಹಕ್ಕಿ ಕೇಳಿತು.

"ಉಳಿಯುವನು. ಆದರೆ ಮುಂದೆ ಅವನಿಗೆ ಮರಣ ಇಟ್ಟದ್ದೆ.'' ಅಂದಿತು ಗಂಡು ಹಕ್ಕಿ. ''ಅದು ಹೇಗೆ?'' ಎಂದು ಕೇಳಿತು ಹೆಣ್ಣು ಹಕ್ಕಿ. ''ನಗರದಲ್ಲಿ ಸೇರುವಾಗ ಅಗಸಿ ಅವನ ಮೈಮೇಲೆ ಬೀಳುವದು. ಮತ್ತು ರಾಜಕುಮಾರ ಸಾಯುವನು." ಎಂದು ಹೇಳಿತು ಗಂಡು ಹಕ್ಕಿ. ''ಅಗಸಿಬಾಗಿಲ ಕೆಡವಿ ರಾಜಕುಮಾರನನ್ನು ಹಿಂದುಗಡೆ ಒಯ್ದರೆ ಅವನು ಉಳಿಯುವನೇ?" ಹೆಣ್ಣು ಹಕ್ಕಿ ಕೇಳಿತು.

''ಉಳಿಯುವನು. ಆದರೆ ದುರ್ದೈವ ಅವನ ಬೆನ್ನುಹತ್ತಿಯೇ ಇದೆ. ಮತ್ತೆ ಮುಂದೆ ಮರಣ ಅವನಿಗೆ ಕಟ್ಟಿ ಇಟ್ಟದ್ದೆ." ಎಂದು ಗಂಡು ಹಕ್ಕಿ ಹೇಳಿತು. ''ಯಾವ ರೀತಿಯ ಮರಣವದು ಅದಾದರೂ ಹೇಳಿರಿ" ಎಂದು ಹೆಣ್ಣು ಹಕ್ಕಿ ಕೇಳಿತು.

"ಅರಸನು ಎಲ್ಲರಿಗೂ ರಾಜಕುಮಾರನ ಮದುವೆಯ ಮೇಜವಾನಿ ಕೊಡುವನು. ಆಗ ಮೀನ ತಿನ್ನುವಾಗ ರಾಜಕುಮಾರನ ಗಂಟಲದಲ್ಲಿ ಎಲುಬು ಸಿಕ್ಕು ಅವನು ಸಾಯುವನು.

"ಆ ಮೀನವನ್ನೇ ಯಾರಾದರೂ ಕಸಿದುಕೊಂಡರೆ ರಾಜಕುಮಾರ ಉಳಿಯುವನೇ ?"

"ಉಳಿಯುವನು. ಆದರೂ ಇನ್ನೊಂದು ಮರಣ ಅವನಿಗಾಗಿ ಕಾದಿಡಲಾಗಿದೆ.

"ಯಾವುದು ?"

"ರಾಜಕುಮಾರ ರಾಜಧಾನಿಗೆ ಹೋಗಿ ಮಲಗಿದ ಮೇಲೆ ಒಂದು ದೊಡ್ಡ ಹಾವು ಅವನಿದ್ದಲ್ಲಿ ಬಂದು ಅವನಿಗೆ ಕಚ್ಚುವದು."

"ಯಾರಾದರೂ ಅದನ್ನು ಕೊಂದರೆ ಅವನು ಉಳಿಯುವನೇ ?"

"ಉಳಿಯುವನು. ಅವನು ಆಮೇಲೆ ಶತಾಯುಷಿಯಾಗುವನು; ಕೀರ್ತಿವಂತ ಅರಸನಾಗುವನು. ನಡೆ ನಾವು ಮಲಗುವ. ನಾವು ಆಡಿದ್ದನ್ನು ಯಾರಾದರೂ ಕೇಳಿದ್ದರೆ ಅವರು ಅದನ್ನು ಯಾರೆದುರೂ ಆಡಬಾರದು. ಆಡಿದರೆ ಅವನು ಕಲ್ಲಾಗಿ ಬೀಳುವನು." ಎಂದು ಗಂಡು ಹಕ್ಕಿ ಹೇಳಿತು.

ಹೆಣ್ಣು ಹಕ್ಕಿ ಕೇಳಿತು "ಅವನು ಕಲ್ಲಾದರೆ ಮನುಷ್ಯನಾಗುವ ಬಗೆ ಇಲ್ಲವೇ ?"

"ಅದಕ್ಕೆ ಉಪಾಯ ಒಂದೇ ಇದೆ. ಇವನು ಯಾರ ಮುಂದೆ ಇದನ್ನು ಹೇಳುತ್ತಾನೆಯೋ ಅವನ ಚೊಚ್ಚಲಮಗನ ರಕ್ತ ಸಿಂಪಡಿಸಿದರೆ ಮತ್ತೆ ಜೀವಂತನಾಗುವನು." ನಡೆ ನಾವು ಇನ್ನು ಮಲಗುವ ಎಂದಿತು ಗಂಡು ಹಕ್ಕಿ.

ಪ್ರಧಾನಕುಮಾರ ಇದನ್ನೆಲ್ಲ ಕೇಳಿದನು. ತನ್ನ ಗೆಳೆಯನ ಸಂಕಟ ಪರಂಪರೆಯು ಮೊದಲೆ ತಿಳಿದದ್ದರಿಂದ ಅವನಿಗೆ ಆನಂದವಾಯಿತು. ಬೆಳಗಾಯಿತು. ರಾಜಕುಮಾರ ಅವನ ಹೆಂಡತಿ ಎದ್ದು, ಮುಖಮಾರ್ಜನ ಮಾಡಿದರು. ಆಮೇಲೆ ಮತ್ತೆ ರಾಜಧಾನಿಯತ್ತ ಕಾಲುನಡಿಗೆಯಿಂದ ಸಾಗಿದರು. ದೂರಿನಿಂದ ಅವರಿಗೆ ಮಂಗಲವಾದ್ಯಗಳ ಧ್ವನಿ ಕೇಳಿಸಿತು.

"ಎಲ್ಲಿಂದ ಬರುತ್ತದೆ ಈ ಧ್ವನಿ?" ಎಂದು ರಾಜಕುಮಾರ ಕೇಳಿದ,

"ಅರಸ ತಮಗಾಗಿ ಕಳುಹಿಸಿದ ಆನೆ, ಕುದುರೆ ಸವಾರರ ಸ್ವಾಗತ ಮೇಳ ಇರಬೇಕು" ಎಂದು ಪ್ರಧಾನಕುಮಾರ ಹೇಳಿದನು.

"ಅರಸನಿಗೆ ಈ ಸಂಗತಿ ತಿಳಿಸಿದವರು ಯಾರು?" ರಾಜಕುಮಾರ ಕೇಳಿದ.

"ಹಕ್ಕಿಪಕ್ಕಿ, ಗಾಳಿ, ತಾರಗೆಗಳಿರಬೇಕು" ಪ್ರಧಾನಪುತ್ರ ಹೇಳಿದ.

"ಹೃದಯಸ್ಥ ದೇವರಿರಬೇಕು" ಅಂದನು ರಾಜಕುಮಾರನ ಹೆಂಡತಿ.

ಹೀಗೆ ಇವರು ಮಾತನಾಡುತ್ತಾ ನಡೆದರು. ಆನೆ, ಕುದುರೆ ಸವಾರರು, ಸಿಪಾಯಿಯರು ಎದುರಾದರು. ಅವರು ಇವರಿಗೆ ನಮಸ್ಕಾರ ಮಾಡಿದರು. ರಾಜಕುಮಾರನಿಗಾಗಿ ಒಂದು ಉತ್ತಮವಾದ ಕುದುರೆ ಶೃಂಗರಿಸಿದ್ದರು. ರಾಜಕುಮಾರ ಕುದುರೆಯ ಮೇಲೆ ಕೂಡ್ರುವಷ್ಟರಲ್ಲಿ ಪ್ರಧಾನಪುತ್ರ ಬಂದು ಹೇಳಿದ, "ನೀವು ಆನೆಯ ಮೇಲೆ ಕೂಡ್ರಿ, ನಾನು ಕುದುರೆ ಹತ್ತುತ್ತೇನೆ ನನ್ನ ಮಾತು ಕೇಳಿರಿ."

ಗೆಳೆಯನ ಉಪಕಾರ ಮತ್ತು ಪ್ರೀತಿ ಲಕ್ಷ್ಯಕ್ಕೆ ತಂದು ರಾಜಕುಮಾರ ಅವನ ಮಾತು ಕೇಳಿದ. ಒಂದು ಕ್ಷಣ ನಾಲ್ಕು ಜನರ ಸಮಕ್ಷಮ ತನ್ನ ಅಪಮಾನವಾಯಿತು ಎಂದು ಅವನಿಗೆ ಅನಿಸಿತು. ಆದರೂ ಒಂದು ನಿಮಿಷ ಮಾತ್ರ. ಅಂಬಾರಿಯಲ್ಲಿ ರಾಜಕುಮಾರ ಮತ್ತು ಅವನ ಹೆಂಡತಿ ಕೂತರು. ಮೆರವಣಿಗೆ ಒಳ್ಳೇ ವಿಜೃಂಭಣೆಯಿಂದ ನಡೆದಿತ್ತು. ಪ್ರಧಾನಪುತ್ರ ಕುದುರೆಯ ಮೇಲೆ ಒಳ್ಳೇ ಒಪ್ಪುತ್ತಿದ್ದನು. ಜನರೆಲ್ಲರೂ ರಾಜಧಾನಿಯ ಹತ್ತರ ಬಂದುಬಿಟ್ಟರು. ಅಗಸಿಯ ಹತ್ತರ ಸರದಾರರು, ಅಮಾತ್ಯರು ಎದುರಾಗಲಿಕ್ಕೆ ಬಂದಿದ್ದರು. ರಾಜಕುಮಾರನ ಮೇಲೆ ಮುತ್ತುಗಳನ್ನು ಎಸೆದರು. ಅಗಸಿಯಲ್ಲಿ ಮೆರವಣಿಗೆ ಸೇರುವಷ್ಟರಲ್ಲಿ ಪ್ರಧಾನ ಕುಮಾರ ಮುಂದೆ ಬಂದು, ಕುದುರೆಯ ಮೇಲಿಂದ ಇಳಿದು ಹೇಳಿದನು, "ಮೊದಲು ಈ ಅಗಸಿ ಬಾಗಿಲವನ್ನು ಕೆಡವಿರಿ, ಆಮೇಲೆ ರಾಜಕುಮಾರನು ಒಳಗೆ ಹೋಗಲಿ."

ಇಂಥ ಉತ್ಸವ ಮತ್ತು ಆನಂದದ ಪ್ರಸಂಗದಲ್ಲಿ ಅಮಂಗಲ ಸೂಚನೆ ಕೇಳಿ ರಾಜಕುಮಾರನಿಗೆ ಬಹಳ ಸಿಟ್ಟು ಬಂದಿತು. ಆದರೂ ಪ್ರಧಾನಪುತ್ರ ಮಾಡಿದ ಉಪಕಾರಗಳನ್ನು ನೆನಿಸಿ ಸುಮ್ಮನಿದ್ದನು. ಆಗಸೆ ಕೆಡವಿಸಲಾಯಿತು. ಆಮೇಲೆ ರಾಜಕುಮಾರನ ಮೆರವಣಿಗೆ ಮುಂದು ವರಿಯಿತು.

ಅರಸ ದೊಡ್ಡ ಮೇಜವಾನಿ ಕೊಡಬೇಕೆಂದು ನಿಶ್ಚಯಿಸಿದ. ರಾತ್ರಿ ಎಂಟು ಗಂಟೆಯಾಗಿತ್ತು. ಭವ್ಯವಾದ ಮಂಟಪದಲ್ಲಿ ಪಂಕ್ತಿ ಕೂಡಿತ್ತು. ಅಲ್ಲಿಯ ವೈಭವದ ವರ್ಣನೆ ಮಾಡುವದೆಂತು ? ಅರಸ ಬಂದನು. ರಾಜ ಕುಮಾರನು ಬಂದನು. ರಾಜಕುಮಾರನ ಹತ್ತಿರ ಪ್ರಧಾನ ಕುಮಾರನ ಎಲೆ ಇಟ್ಟಿತ್ತು. ಇನ್ನು ಊಟಕ್ಕೆ ಸುರುಮಾಡುವವರಿದ್ದರು. ಅಷ್ಟರಲ್ಲಿ ಪ್ರಧಾನ ಕುಮಾರನು ರಾಜಕುಮಾರನ ಎಲೆಯೊಳಗಿದ್ದ ಸುಂದರವಾದ ಮೀನತಕ್ಕೊಂಡನು. ತುಂಬಿದ ಪಂಕ್ತಿಯಲ್ಲಿ ಅಪಮಾನ ! ರಾಜಕುಮಾರ ಸಿಟ್ಟಿನಿಂದ ಕೆಂಡದಂತೆ ಆದನು. ಆದರೆ ಮಾಡುವದೇನು ?

ಊಟವಾಯಿತು. ರಾಜಕುಮಾರ ಪ್ರಧಾನ ಕುಮಾರನಿಗೆ ಅಂದನು, "ಇನ್ನು ನಿನ್ನ ಮೋರೆ ನನಗೆ ತೋರಿಸಬೇಡ. ನಡೆ ನನ್ನೆದುರು ನಿಲ್ಲಬೇಡ. ಇವತ್ತು ಮುಂಜಾನೆಯಿಂದ ನಾನು ನಿನ್ನನ್ನು ಪರೀಕ್ಷಿಸುತ್ತ ಇದ್ದೇನೆ. ನಾನು ಎಷ್ಟು ಅಪಮಾನ ಸಹಿಸಬೇಕು ? ನನ್ನ ತಾಳ್ಮೆಗೂ ಮರ್ಯಾದೆ ಇದೆ. ಈರೀತಿ ನಾಲ್ಕು ಜನರಲ್ಲಿ ನನ್ನನ್ನು ಅವಮಾನಿಸುವದೆ ? ನಡೆ ಹೋಗು!" ಹೀಗಂದು ರಾಜಕುಮಾರ ರೇಗಿಗೆದ್ದು ಹೊರಟು ಹೋದನು.

ಪ್ರಧಾನಪುತ್ರ ಸಿಟ್ಟಿಗೇಳಲಿಲ್ಲ. ಪ್ರೇಮವಿದ್ದಲ್ಲಿ ಸಿಟ್ಟು, ಅಪಮಾನ, ನಿಂದೆ ಇವೆಲ್ಲವು ಓಡಿಹೋಗುತ್ತವೆ. ತಿರಸ್ಕಾರವನ್ನಾದರೂ ಸಹನಮಾಡಿ ಉಳಿಯುವ ಪ್ರೀತಿಯೇ ನಿಜವಾದ ಪ್ರೇಮ. ಪ್ರಧಾನಪುತ್ರ ಮನಸ್ಸಿನಲ್ಲಿ ಅಂದುಕೊಂಡ, "ಇನ್ನೊಂದು ಬಾರಿ ನಾನು ನಿನ್ನ ಬಳಿಯಲ್ಲಿರುವದು ಅವಶ್ಯವಾಗಿದೆ. ಆಮೇಲೆ ನಾನು ಹೋಗಿಬಿಡುತ್ತೇನೆ." ಹೀಗೆ ವಿಚಾರ ಮಾಡಿ ರಾಜಕುಮಾರ ಮಲಗುವ ಕೋಣೆಗೆ ಅವನು ಹೋಗುವದಕ್ಕಿಂತ

ಮೊದಲು ಹೋಗಿ ಅಡಗಿ ಕೂತನು. ದಣಿದದ್ದರಿಂದ ರಾಜಕುಮಾರ ಬಂದವನೆ ಮಲಗಿದನು. ಅವನಿಗೆ ನಿದ್ದೆ ಹತ್ತಿತು. ಪ್ರಧಾನಪುತ್ರ ಬಿಚ್ಚುಗತ್ತಿ ಹಿಡಿದುಕೊಂಡು ಅಲ್ಲಿಯೇ ಪಲಂಗದ ಹತ್ತಿರ ನಿಂತನು. ಅಷ್ಟರಲ್ಲಿ ಒಂದು ನಾಗರ ಹಾವು ಬಂದಿತು. ಅದು ಪಲಂಗದ ಮೇಲೆ ಹತ್ತಲಿಕ್ಕೆ ಹತ್ತಿತು. ಪ್ರಧಾನಪುತ್ರ ಕತ್ತಿಯಿಂದ ಅದನ್ನು ತುಂಡು ತುಂಡು ಮಾಡಿ ಕೊಂದನು. ಅವನು ಹಾಕಿದ ಪೆಟ್ಟು ಒಳ್ಳೆ ಕಸುವಿನದು ಇತ್ತು. ನಾಗರ ಹಾವಿನ ರಕ್ತವು ರಾಜಕುಮಾರನ ಕೈಮೇಲೆ ಜೋರಿನಿಂದ ಸಿಡಿಯಿತು. ಅದನ್ನು ಒರಿಸಲು ಪ್ರಧಾನ ಕುಮಾರ ಮುಂದೆ ಹೋದ. ಅವನು ಸಾವಕಾಶ ಒರಿಸಿದ ಆದರೆ ರಾಜಕುಮಾರ ಎಚ್ಚರಾದನು.

"ನೀನು ಇನ್ನೂ ಇಲ್ಲಿಯೇ? ಕೈಯಲ್ಲಿ ಬಿಚ್ಚುಗತ್ತಿಯೇ? ನನ್ನನ್ನು ಕೊಲ್ಲಲು ಬಂದಿಯಾ ದುಷ್ಟಾ?" ಎಂದು ರಾಜಕುಮಾರನು ಚೀರಿದನು. ರಾಜಕುಮಾರನ ಸಿಟ್ಟಿನ ಮಿತಿಮೀರಿತು.

ಪ್ರಧಾನ ಕುಮಾರ ಅಂದನು, "ಮಹಾರಾಜ! ನಿಮ್ಮ ಜೀವ ಉಳಿಸಲು ಈ ದಾಸ ಇಲ್ಲಿ ಬಂಧಿದ್ದ. ಈ ನಾಗರಹಾವು ತಮಗೆ ದಂಶ ಮಾಡಲು ಬರುವದೆಂದು ನನಗೆ ಗೊತ್ತಿತ್ತು. ಅದನ್ನು ಕೊಲ್ಲುವದಕ್ಕೆ ನಾನು ಇಲ್ಲಿಗೆ ಬಂದೆ. ನಾಗರ ಹಾವು ಸತ್ತು ಬಿದ್ದದ್ದು ನೋಡಿದಿರಾ?"

ರಾಜಕುಮಾರ ಹಾವು ಸತ್ತದ್ದು ನೋಡಿ ಅಂದನು, "ನೀನು ಬಂದದ್ದು ನನ್ನನ್ನು ಕೊಲ್ಲಲಿಕ್ಕೆ. ದುಷ್ಟಾ ನಿನ್ನನ್ನು ದಂಶ ಮಾಡಲಿಕ್ಕೆ ಬಂದಿತ್ತು ಆ ಹಾವು. ಓಹೋ ಒಳ್ಳೇ ಗೆಳೆಯ! ಗೆಳೆಯನನ್ನು ಕೊಲ್ಲುವ ಗೆಳೆಯ!" ರಾಜಕುಮಾರನ ಮನಸ್ಸಿನಲ್ಲಿ ಸಂತಾಪ, ತಿರಸ್ಕಾರ, ಉಪಹಾಸ ತುಂಬಿ ತುಳುಕುತ್ತಿದ್ದವು.

"ಮುಂಜಾನೆಯಿಂದ ನನ್ನ ವರ್ತನೆ ಇದ್ದದ್ದೆಲ್ಲ ನಿಮ್ಮನ್ನು ಉಳಿಸಲು ಇದ್ದದ್ದೇ ಅದೆ. ಅವನ್ನೆಲ್ಲ ನಿಮಗೆ ಹೇಳಿದರೆ ನಾನು ಕಲ್ಲಾಗಿ ಬೀಳುವೆ, ಆದ್ದರಿಂದ ಹೇಳುವಂತಿಲ್ಲ." ಎಂದು ಪ್ರಧಾನಕುಮಾರ ಅಂದನು.

"ಧೋಂಗಿ, ಸುಳ್ಳ, ಠಕ್ಕ ಈ ಸೋಗು ನನ್ನೆದುರು ಬೇಡ. ಕಲ್ಲಾಗಿ ಬಿದ್ದರೂ ಅಡ್ಡಿ ಇಲ್ಲ. ಬೊಗಳು. ನಿನ್ನ ಕಥೆ" ಎಂದನು ರಾಜ ಕುಮಾರ.

"ಓಳ್ಳೇದು ಮಹಾರಾಜ! ನಿಮಗೆ ಗೆಳೆಯ ಬೇಡ ಅಂದಮೇಲೆ ನಾನಾದರೂ ಜೀವಂತ ಬಾಳಿ ಮಾಡುವದಾದರೂ ಏನು? ಹೇಳುತ್ತೇನೆ ಲಾಲಿಸರಿ ಮಹಾರಾಜ! ಇನ್ನು ಮುಂದೆ ನಿಮಗೆ ಯಾವ ಸಂಕಟವೂ ಇಲ್ಲ. ನಾನು ಸತ್ತರೂ ಅಡ್ಡಿಯಿಲ್ಲ. ನಿನ್ನೆ ರಾತ್ರಿ ನಾನು ಗಂಡು-ಹೆಣ್ಣು ಹಕ್ಕಿಗಳು ನುಡಿಯುವದನ್ನು ಕೇಳಿದೆ. ನೀವು ಆಗ ಮಲಗಿದ್ದಿರಿ. ನಾನು ಕಾವಲು ಇದ್ದೆ. ಗಂಡುಹಕ್ಕಿ ಹೇಳಿತು, ಕುದುರೆಯ ಮೇಲೆ ರಾಜಕುಮಾರ ಕೂತರೆ ಅವನು ಸಾಯುವದು ನಿಶ್ಚಿತ. ಆದ್ದರಿಂದ ನಿಮಗೆ ಕುದುರೆಯ ಮೇಲೆ ಕೂಡಗೊಡಲಿಲ್ಲ. ಅಪಮಾನಮಾಡಬೇಕೆಂದಲ್ಲ. " ಇಷ್ಟು ಹೇಳಿದಾಗ ಪ್ರಧಾನಕುಮಾರ ಮೊಣಕಾಲಿನ ವರೆಗೆ ಕಲ್ಲಾಗಿ ಬಿಟ್ಟದ್ದೇನೆ ಮುಂದೆ ಹೇಳಲಿಯಾ?" ಅಂದನು

"ಹೇಳು ಹೇಳು, ಎಲ್ಲವನ್ನು ಹೇಳು" ಎಂದು ಒದರಿದ ರಾಜ ಕುಮಾರ.

"ರಾಜಕುಮಾರ ಅಗಸೆ ಸೇರಿದರೆ ಅಗಸೆ ಬಾಗಿಲ ಬದ್ದು ರಾಜ ಕುಮಾರ ಸಾಯುವನು. ಅದನ್ನು ಮೊದಲೆ ಕೆಡವಿದರೆ ಮಾತ್ರ ಅವನು ಉಳಿಯುವನು" ಎಂದು ಹಕ್ಕಿ ನುಡಿದಿತ್ತು ಅದಕ್ಕಾಗಿ ನಾನು ಅಗಸೆ ಬಾಗಿಲ ಕೆಡವಿಸಿದೆ." ಇಷ್ಟು ಹೇಳಿದಾಕ್ಷಣ ಟೊಂಕದ ವರೆಗೆ ಕಲ್ಲಾಗಿದ್ದ ಪ್ರಧಾನಪುತ್ರ. ನೋಡು ಟೊಂಕದ ವರೆಗೆ ಕಲ್ಲಾಗಿದ್ದೇನೆ. ಇನ್ನು ಮುಂದೆ ಹೇಳಲಿಯಾ? ಅಂದನು.

"ಮತ್ತೇನು ಕೇಳುತ್ತೀ ಹೇಳು" ಅಂದ ರಾಜಕುಮಾರ.

"ಅರಸ ಮೇಜವಾನಿ ಕೊಡುವನು. ಒಂದು ಉತ್ತಮ ಜಾತಿಯ ಮೀನವನ್ನು ಕರದು ರಾಜಕುಮಾರನ ತಾಟಿನಲ್ಲಿ ಬಡಿಸುವರು. ಅದನ್ನು ತಿಂದರೆ ಅವನು ಸಾಯುವನು" ಎಂದು ಅಂದಿತು ಗಂಡುಹಕ್ಕಿ. ಅದಕ್ಕಾಗಿ ನಾನು ಅದನ್ನು ನಿಮ್ಮ ಎಲೆಯೊಳಗಿಂದ ತಕ್ಕೊಂಡೆ. ಇಷ್ಟು ಹೇಳುವಷ್ಟ

ರಲ್ಲಿ ಕುತ್ತಿಗೆಯ ವರೆಗೆ ಕಲ್ಲಾಗಿದ್ದ. "ಇನ್ನೂ ಮುಂದೆ ಹೇಳಲಿಯಾ?" ಅಂದನು ಪ್ರಧಾನ ಪುತ್ರನು..

"ಹೇಳು ಹೇಳು ಮತ್ತೇಕೆ ಕೇಳುವದು" ಅಂದನು ರಾಜಕುಮಾರ.

"ಕೊನೆಯ ಭಾಗ ಹೇಳುವಷ್ಟರಲ್ಲಿ ನಾನು ಪೂರ್ಣ ಕಲ್ಲಾಗುವೆ. ಆಮೇಲೆ ನಿನಗೆ ಪಶ್ಚಾತ್ತಾಪವಾಗಿ ನನ್ನ ಗೆಳೆಯ ಜೀವಂತನಾಗಬೇಕು ಎಂದೆನಿಸಬಹುದು. ಹಾಗೆ ಅನಿಸಿದರೆ ಅದಕ್ಕೆ ಹಕ್ಕಿ ಹೇಳಿದ ಒಂದೇ ಒಂದು ಉಪಾಯವಿದೆ. ನಿನ್ನ ಚೊಚ್ಚಲ ಮಗನನ್ನು ಕೊಂದು ಅದರ ರಕ್ತವನ್ನು ನನ್ನ ಮೇಲೆ ಸಿಂಪಡಿಸಿದರೆ ಮಾತ್ರ ನಾನು ಜೀವಂತನಾಗುವೆ. ಆದರೆ ನನಗೆ ಮತ್ತೆ ಜೀವಂತನಾಗುವ ಆಶೆ ಇಲ್ಲ. ನನ್ನ ಗೆಳೆಯನನ್ನು ಪ್ರೀತಿಸಿದೆ, ಅಷ್ಟೇ ಆನಂದ ಸಾಕು ನನಗೆ. ನನ್ನ ಕೆಲಸ ಆಗಿದೆ. ಹಕ್ಕಿ ಹೇಳಿದ ಕೊನೆಯಮಾತಿದು. "ರಾಜಕುಮಾರ ಭೋಜನಮಾಡಿ ಮುಗಿಸಿ ಮಲಗಿದಮೇಲೆ ಒಂದು ನಾಗರಹಾವು ಅವನು ಮಲಗುವ ಕೋಣೆಯಲ್ಲಿ ಅಕಸ್ಮಾತ್ತಾಗಿ ಬಂದು ಅವನನ್ನು ಕೊಲ್ಲುವದು. ಆ ಹಾವನ್ನು ಮೊದಲೆ ಯಾರಾದರೂ ಕೊಂದರೆ ಅವನು ೧೦೦ ವರ್ಷ ಬಾಳಿ, ಒಳ್ಳೆ ಹೆಸರು ಪಡೆ ಯುವನು" ಇಷ್ಟು ಅಂದೊಡನೆಯೇ ಪ್ರಧಾನಕುಮಾರ ಕಲ್ಲಿನ ಪುತ್ಥಳಿ ಆಗಿ ನಿಂತನು.

ರಾಜಕುಮಾರನಿಗೆ ಬಹಳ ವ್ಯಸನವಾಯಿತು. ಅವನು ಅಳಹತ್ತಿ ದನು. ತನ್ನ ಗೆಳೆಯ ಎಷ್ಟು ಉದಾರಮನಸ್ಸಿನವನು ಅನ್ನುವದು ಮತ್ತೆ ಮತ್ತೆ ನೆನಪಾಗಹತ್ತಿತು. ಕಲ್ಲಿನ ಪುತ್ಥಳಿಯ ಮೇಲೆ ಕಂಬನಿ ಸುರಿಸಿದ. ಆದರೆ ಕಂಬನಿಗಳಿಂದ ಅದು ಜೀವಂತವಾಗುವದೇ? ಚೊಚ್ಚಲ ಮಗನ ರಕ್ತದಿಂದಲೇ ಸಾಧ್ಯವಿತ್ತು ಆ ಮಾತು.

ಮರುದಿನ ರಾಜಕುಮಾರ ತನ್ನ ಹೆಂಡತಿಗೆ ಆವದ್ದನ್ನೆಲ್ಲ ತಿಳಿಸಿದ. "ಚೊಚ್ಚಲ ಮಗನನ್ನು ಅರ್ಪಿಸುವದು ನಿನಗೆ ಸಾಧ್ಯವೇ? ನಿನಗೆ ಧೈರ್ಯವಾಗುವದೆ?" ಎಂದು ಕೇಳಿದನು. "ದೇವರ ದಯೆಯಿದ್ದರೆ ಬೇಕಾದಷ್ಟು ಮಕ್ಕಳನ್ನು ಪಡೆಯಬಹುದು. ಆದರೆ ಇಂಥ ಗೆಳೆಯ

ಜೀವಂತ ಆಗೇ ತೀರಬೇಕು. ನಾವು ಸ್ವಲ್ಪಮಟ್ಟಿಗಾದರೂ ಅವನ ಋಣ ತೀರಿಸಿದಂತಾಗುವದು." ಎಂದು ಅವನ ಪತ್ನಿ ಅಂದಳು.

ದಿನಾಲು ರಾಜಕುಮಾರ ಮತ್ತು ಅವನ ಹೆಂಡತಿ ಆ ಪುತ್ಥಳಿಯ ಪೂಜೆ ಮಾಡುತ್ತಿದ್ದರು. ಪ್ರಧಾನನಿಗೆ ತನ್ನ ಮಗ ಎಲ್ಲಿ ಹೋದನೆಂಬುದು ತಿಳಿಯಲಿಲ್ಲ. ರಾಜಕುಮಾರನೊಡನೆ ಜಗಳಾಡಿದ್ದರಿಂದ ದೇಶಾಂತರ ಮಾಡಿದನೆಂದು ಜನವಾರ್ತೆ ಇತ್ತು. ಪ್ರಧಾನಪುತ್ರನ ಹೆಂಡತಿಗೆ ಅಪಾರವಾದ ದುಃಖ. ಮುದುಕ ಪ್ರಧಾನನಿಗೆ ತನ್ನ ಸೊಸೆಯ ದುಃಖ ನೋಡಿ ಹೆಚ್ಚು ಪ್ರಸನ್ನವಾಗುತ್ತಿತ್ತು. ಸೊಸೆ ತೌರಮನೆಗೆ ಹೋದಳು. ಅಲ್ಲಿ ದಿನಾಲು ದೇವಿಯನ್ನು ಪೂಜಿಸಿ ಬೇಡಿಕೊಳ್ಳುತ್ತಿದ್ದಳು. "ಅಮ್ಮಾ! ಜಗದಂಬೆ! ನನ್ನ ಕುಂಕುಮ ಬಳಿ ಕಾಯಿ ನೀನು! ನಾನು ನಿನ್ನ ಮಗಳು ನನ್ನ ಸೌಭಾಗ್ಯ ನಿನ್ನ ಕೈಯಲ್ಲಿದೆ. ನೀನೇ ನನ್ನನ್ನು ಕಾಪಾಡು."

ಹೀಗೆ ಕೆಲವು ದಿನಗಳಾದವು. ತಿಂಗಳುಗಳಾದವು. ರಾಜಕುಮಾರನಿಗೆ ಒಂದು ಗಂಡು ಕೂಸು ಹುಟ್ಟಿತು. ಆನಂದವಾಯಿತು; ಆದರೆ ಆ ಆನಂದ ಬಹಳ ದಿನದವರೆಗೆ ಇರುವಂತಿದ್ದಿಲ್ಲ. ಗೆಳೆಯನೋ, ಮಗನೋ ಎಂಬ ಪ್ರಶ್ನೆ ಅವನ ಎದುರು ಇತ್ತು. ಪುತ್ರನನ್ನು ಪಡೆಯಬಹುದು. ಆದರೆ ಇಂಥ ಮಿತ್ರ ಸಿಗುವದು ಸಾಧ್ಯವಿಲ್ಲ ಎಂದು ರಾಜಕುಮಾರ ಮತ್ತು ಅವನ ಹೆಂಡತಿ ಇಬ್ಬರು ನಿಶ್ಚಯಮಾಡಿದರು. ರಾಜಕುಮಾರ ಮತ್ತು ಅವನ ಹೆಂಡತಿ ಇಬ್ಬರು ಆ ಹುಟ್ಟಿದಕೂಸನ್ನು ಆ ಸುಕುಮಾರ ಹೂವನ್ನು ತಕ್ಕೊಂಡು ಆ ಪುತ್ಥಳಿ ಇದ್ದಲ್ಲಿ ಬಂದರು. ಇಬ್ಬರು ಮನಸ್ಸು ಗಟ್ಟಿಮಾಡಿದರು. ರಾಜಕುಮಾರ ಮಗನನ್ನು ಕೊಂದು ರಕ್ತದ ಧಾರೆಯಿಂದ ಪುತ್ಥಳಿಯನ್ನು ಎರೆದನು. ಪ್ರಧಾನಕುಮಾರ ಜೀವಂತನಾದ. ಎದುರು ಸತ್ತಕೂಸನ್ನು ನೋಡಿದ. ಆ ಕೂಸನ್ನು ಒಂದು ಅರಿವೆಯಲ್ಲಿ ಕಟ್ಟಿಕೊಂಡನು ಮತ್ತು ಅಂದನು, "ಈ ಕೂಸನ್ನು ಜೀವಂತಮಾಡಿಕೊಂಡು ಬಂದರೆಮಾತ್ರ ನನ್ನ ಮೋರೆ ತೋರಿಸುವೆನು."

ಕೈಯಲ್ಲಿ ಸತ್ತ ಕೂಸನ್ನು ತಕ್ಕೊಂಡು ತನ್ನ ಹೆಂಡತಿಯ ತೌರಮನೆಗೆ ಹೊರಟನು. ಆ ಕೂಸು ಕಟ್ಟಿದ ಗಂಟು ಆ ಊರ ಹೊರಗೆ

ಒಂದು ಗಿಡಿಬ ಮೇಲೆ ಅಡಗಿಸಿ ಇಟ್ಟನು ಮತ್ತು ತಾನೊಬ್ಬನೇ ಬರಿಕೈಲೆ ಹೆಂಡತಿಯ ಕಡೆಗೆ ಹೋದನು. ಗಂಡನು ಸುಖರೂಪವಾಗಿ ತಿರುಗಿ ಬಂದದ್ದನ್ನು ನೋಡಿ ಹೆಂಡತಿಗೆ ಹಿಡಿಸಲಾರದಷ್ಟು ಆನಂದವಾಯಿತು. ಆದರೆ ಅದು ಬಹಳ ಹೊತ್ತು ಇರಲಿಲ್ಲ. ಗಂಡನು ಮಾತನಾಡಲಿಲ್ಲ, ನಗಲಿಲ್ಲ, ಅವನ ಮುಖಚರ್ಯೆ ಒಳ್ಳೇ ಗಂಭೀರವಾಗಿತ್ತು. ತನ್ನ ತಪ್ಪಾವದು ಎನ್ನುವದು ಅವನ ಹೆಂಡತಿಗೆ ಹೊಳೆಯಲೊಲ್ಲದು. ತನ್ನಿಂದ ಗಂಡನಿಗೆ ಆನಂದವಾಗದಿದ್ದರೆ ತಾನು ಜೀವದಿಂದ ಇದ್ದೇನು ಮಾಡಬೇಕೆಂದು ವಿಚಾರಿಸಿ ಅವಳು ಜೀವ ಕೊಡುವ ನಿಶ್ಚಯ ಮಾಡಿದಳು.

ಪ್ರಧಾನಕುಮಾರ ನಿದ್ದೆ ಬಂದಂತೆ ತೋರಿಸಿದ್ದ. ಗಂಡನು ಮಲಗಿಕೊಂಡದ್ದು ನೋಡಿ ಆ ಸಾಧ್ವಿ ಎದ್ದಳು. ಅವಳು ಎಲ್ಲಿ ಹೋಗುತ್ತಾಳೆ ಅದನ್ನು ನೋಡುವದಕ್ಕಾಗಿ ಪ್ರಧಾನಪುತ್ರ ಅವಳನ್ನು ಹಿಂಬಾಲಿಸಿದ. ಅವಳು ದೇವಿಯ ಗುಡಿಗೆ ಹೋದಳು, ಕೈಮುಗಿದು ದೇವಿಗೆ ಅಂದಳು, "ಅಮ್ಮಾ! ಜಗದಂಬೆ! ನೀನು ಇಂದಿನವರೆಗೆ ನಾನು ಮಾಡಿದ ಪ್ರಾರ್ಥನೆ ಕೇಳಿದಿ. ನನ್ನ ಗಂಡ ತಿರುಗಿ ಬಂದ. ಆದರೆ ತಾಯೀ! ನಾನು ಅವರಿಗೆ ಬೇಡಾಗಿದ್ದೇನೆ. ನನ್ನನ್ನು ನೋಡಿ ಅವರಿಗೆ ಆನಂದವಾಗಲಿಲ್ಲ. ಅವರನ್ನು ನೋಡಿ ನನ್ನ ಹೃದಯ ಉಕ್ಕೇರಿತು. ಆದರೆ ನನ್ನನ್ನು ನೋಡಿ ಅವರಿಗೆ ದುಃಖವಾಯಿತು. ನಾನಾದರೂ ಜೀವಂತವಿರುವದೇತಕ್ಕೆ? ನಿನ್ನ ಅಡಿಯಲ್ಲಿಯೇ ಸಾಯುವೆ ಕ್ಷಮಿಸು; ನಿನ್ನ ಮಗಳನ್ನು ಕ್ಷಮಿಸು."

ಇನ್ನು ಆ ಸಾಧ್ವಿ ಪತಿವ್ರತೆಯು ತಲೆ ಒಡೆದುಕೊಳ್ಳಬೇಕು ಅನ್ನುವಷ್ಟರಲ್ಲಿ ದೇವಿಯು ಪ್ರಸನ್ನಳಾಗಿ ಅವಳನ್ನು ಅಪ್ಪಿಕೊಂಡು ಅಂದಳು, "ಛೀ ಹುಚ್ಚಿ! ನಿನ್ನ ಗಂಡನಿಗೆ ಅವನ ವ್ಯಥೆಯು, ವ್ಯಸನದ ಕಾರಣವನ್ನು ಕೇಳು. ಕೇಳದೆ, ಮಾತನಾಡದೆ ನಿನಗೆ ತಿಳಿಯುವದಾದರೂ ಹೇಗೆ? ಅವನ ವ್ಯಸನವಾವುದು ತಿಳಿದುಕೊಂಡು ಬಾ, ನಾನು ಅದನ್ನು ನಿವಾರಿಸುವೆನು."

ಪತಿವ್ರತೆಗೆ ಒಳ್ಳೇ ಆನಂದವಾಯಿತು. ಅವಳು ಗಡಿಬಿಡಿಯಿಂದ ಮನೆಗೆ ಹೋದಳು, ಅವಳ ಗಂಡ ಮೊದಲೇ ಬಂದು ಮಲಗಿದ್ದನು.

ಮರು ದಿವಸ ಅವಳು ಗಂಡನಿಗೆ, "ನಿಮ್ಮ ವ್ಯಥೆ ಯಾವುದು?" ಎಂದು ಕೇಳಿದಳು. ಅವನು ಹೇಳಿದ, "ನೀನು ಇಂದು ನನ್ನನ್ನು ಜೀವಂತ ಕಂಡಿರುವಿ. ಆದರೆ ನಾನು ಜೀವಂತನಾಗಬೇಕಾದರೆ ರಾಜಕುಮಾರ ತನ್ನ ಮಗನನ್ನು ತುಂಡರಿಸಿದ್ದಾನೆ, ನಾನು ಆ ತುಂಡುಗಳನ್ನು ನನ್ನೊಡನೆ ತಂದಿದ್ದೇನೆ. ಅವುಗಳನ್ನು ಜೋಡಿಸಿ ಜೀವಂತ ಮಾಡಿಕೊಂಡು ಬಾ. ಅಂದರೇನೇ ನೀನು ನಿಜವಾದ ಪತಿವ್ರತೆ. ಆ ಬಾಲಕ ಜೀವಂತನಾದರೆ ನನ್ನಲ್ಲಿ ಜೀವಕಳೆ ತುಂಬುವದು. ನಾನು ನಗುವೆ, ಆನಂದಪಡುವೆ."

ಗಂಡನ ಮಾತು ಹೆಂಡತಿ ಕೇಳಿ, "ನಾವು ಇಬ್ಬರೂ ಇಂದು ರಾತ್ರಿ ಆ ತುಂಡು ತಕ್ಕೊಂಡು ದೇವಿಯ ಮಂದಿರಕ್ಕೆ ಹೋಗುವ. ನಮ್ಮಮ್ಮ ಜಗದಂಬೆ ಆ ಬಾಲಕನನ್ನು ಜೀವಂತ ಮಾಡುವಳು. ನೀವು ಚಿಂತೆ ಮಾಡಬೇಡಿರಿ." ಎಂದು ಹೇಳಿದಳು.

ಅವರಿಬ್ಬರೂ ರಾತ್ರಿಯಾಗುವ ಹಾದಿ ಕಾಯುತ್ತ ಇದ್ದರು. ರಾತ್ರಿಯಾಯಿತು. ಜಗತ್ತೆಲ್ಲ ನಿದ್ರಾವಶವಾಯಿತು. ಅವರಿಬ್ಬರೂ ಮೃತ ಬಾಲಕನ ತುಂಡುಗಳೊಡನೆ ದೇವಿಯ ಮಂದಿರಕ್ಕೆ ಹೋದರು. ಆ ಪತಿವ್ರತೆ ಅಂದಳು, "ಅಮ್ಮಾ, ಜಗದಂಬೆ! ಈ ಬಾಲಕನ ಬಲಿದಾನದಿಂದ ನನ್ನ ಪತಿ ನನಗೆ ದೊರಕಿದ. ನೀನು ಈ ಬಾಲಕನನ್ನು ಜೀವಂತಮಾಡು. ಇಲ್ಲದಿದ್ದರೆ ನನ್ನ ಪತಿದೇವನು ಜೀವಂತನಿರುವದು ಸಾಧ್ಯವಿಲ್ಲ. ಈ ಬಾಲಕ ನಕ್ಕರೆ ಅವರು ನಗುವರು. ಅಮ್ಮಾ, ನಿನ್ನ ಅಮೃತ ಹಸ್ತವನ್ನು ಈ ಬಾಲಕನ ತುಂಡುಗಳ ಮೇಲೆ ಇಡು."

ದೇವಿ ಕೈಮುಟ್ಟಿದಳು. ಬಾಲಕನು ಹಸನ್ಮುಖಿಯಾದನು. ಪ್ರಧಾನ ಪುತ್ರ ಮತ್ತು ಹೆಂಡತಿ ರಾಜಕುಮಾರನ ಬಾಲಕನೊಡನೆ ರಾಜಧಾನಿಗೆ ತಿರುಗಿ ಬಂದನು. ಎಲ್ಲರಿಗೂ ಆನಂದವಾಯಿತು. ಅರಸ ರಾಜಕುಮಾರನಿಗೆ ಪಟ್ಟಕಟ್ಟಿದ. ಪ್ರಧಾನಕುಮಾರನನ್ನು ಪ್ರಧಾನನನ್ನಾಗಿ ಮಾಡಿದ. ಅರಸ ಪ್ರಧಾನರಿಬ್ಬರೂ ಸನ್ಯಾಸ ಸ್ವೀಕರಿಸಿ ಅಡವಿ ಸೇರಿದರು. ಇತ್ತ ಹೊಸ ಅರಸ ಪ್ರಧಾನರಿಬ್ಬರೂ ಉತ್ತಮ ರೀತಿಯಿಂದ ರಾಜ್ಯಭಾರ

ಮಾಡಹತ್ತಿದಳು. ಪ್ರಜೆಗಳೆಲ್ಲರೂ ಸುಖದಿಂದ ಬಾಳಿದರು. ಯಾರೂ ರೋಗದಿಂದ ಬಳಲುತ್ತಿದ್ದಿಲ್ಲ. ಯಾರಿಗೂ ಯಾವತರದಿಂದ ಕಾಡಾಟ ವಿದ್ದಿಲ್ಲ. ಯಾರಿಗೂ ಯಾವ ದುಃಖಗಳಿರಲಿಲ್ಲ. ಮಳೆ ಬೆಳೆ ಚನ್ನಾಗಿತ್ತು. ಎಲ್ಲರೂ ಉತ್ತಮ ಶಿಕ್ಷಣ ಪಡೆಯುತ್ತಿದ್ದರು. ಯಾರೂ ಉದ್ಯೋಗವಿಲ್ಲದೆ ಇದ್ದಿಲ್ಲ. ಎಲ್ಲ ಉದ್ಯೋಗಗಳು ಬೆಳೆಯುವದರಲ್ಲಿಯೇ ಇದ್ದವು. ಯಾರೂ ಯಾರನ್ನೂ ಒತ್ತಾಯಪಡಿಸುತ್ತಿದ್ದಿಲ್ಲ. ಯಾರಲ್ಲಿಯೂ ಅನುದಾರತೆ ಇದ್ದಿಲ್ಲ. ಪ್ರಜೆಗಳೆಲ್ಲರೂ ಹೊಸ ಅರಸ ಪ್ರಧಾನರನ್ನು ಹೊಗಳುತ್ತಿದ್ದರು. ಆನಂದ ಸಾಮ್ರಾಜ್ಯವೇ ಹಬ್ಬಿತ್ತು.

ನಮ್ಮ ನಿಮ್ಮ ದೇಶದಲ್ಲಿ ಇದೇ ತರದ ಆನಂದ ಸಾಮ್ರಾಜ್ಯವು ಹುಟ್ಟಿ, ಬಾಳಿ-ಬೆಳೆಯಲಿ ಎಂಬುದೊಂದೇ ಆಸೆ ನನಗೆ. ಮತ್ತಾವುದು ?

ತೀರಿತು ನನ್ನ ಕಥೆ! ಕುಣಿಯೋಣು ಬರ್ರಿ, ಕುಣಿಯೋಣು ಬರಿ ಎಲ್ಲರು !!

